ಸತ್ಯಸುಗುಣ ಸುಂದರ ಸಾಹಿತ್ಯಮಾಲೆ - ೫೯

# ಯತೀಂದ್ರ ರಾಮಾನುಜ

(ಜೀವನ-ಸಾಧನೆ-ಹಿರಿಮೆ-ಸ್ತೋತ್ರಗಳು)

ಲೇಖಕ - ಸಂಪಾದಕ - ಪ್ರಕಾಶಕ

**ಹೆಚ್. ಜೆ. ರಾಮಯ್ಯಂಗಾರ್**

ಶ್ರೀ ಲಕ್ಷ್ಮೀವೆಂಕಟೇಶ ಸದನ

೧೧೭/೫ಎ, ನಾಗರಾಜ ವಿಸ್ತರಣ

ಬಸವನಗುಡಿ ಬೀದಿ ಅಡ್ಡರಸ್ತೆ

ಬೆಂಗಳೂರು -೫೬೦೦೧೯, ದೂರವಾಣಿ : ೬೬೧೩೦೨೫

ವಿತರಕರು

**ವಸಂತ ಪ್ರಕಾಶನ**

೧೦, ತುಳಸಿವನಂ, ಬಳೇಪೇಟೆ

ಬೆಂಗಳೂರು ೫೬೦೦೫೩, ದೂರವಾಣಿ : ೨೨೮೭೮೭೬

**YATHEENDRA RAMANUJA** - a book on the life, achievement, greatness and Stotras of Acharya Ramanuja, Written, edited and Published by H.J. Ramaiengar, Shree Lakshmi Venkatesha Sadana, 117/5A, Nagaraja layout, Bull Temple Road Cross, Bangalore - 560019, Phone · 6613025

First Published : 2003

Pages : VIII + 56

Copies : 1000

Price : Rs. 30

This book is Published with some Financial Assistance of
Sree Lakshmi Hayagreeva Seva Trust, Rajajinagar, Bangalore - 560010
and
Shree S. Mukundan, Superintendent, Regional Transport office,
Koramangala, Bangalore - 560054

Printed at :
**ILA Mudrana**
# 36, 40 Ft. Road, New Timberyard Layout
Raghavanagar, Bangalore - 560 026
✆ 6755746




ಶ್ರೀ ರಾಮಾನುಜಾಚಾರ್ಯ

ಊರಿನ ಒಳಗೆ ಸುಪ್ರಸಿದ್ಧ ಪ್ರಸನ್ನ ವೆಂಕಟರಮಣಸ್ವಾಮಿ
ದೇವಾಲಯ, ಹತ್ತಿರದ ಬೆಟ್ಟದ ಮೇಲೆ ರಂಗನಾಥಸ್ವಾಮಿ
ದೇವಾಲಯ ಇರುವ ಹುಲಿಕಲ್ಲಿನ ಹೊಸಮನೆ
ರಾಮಸ್ವಾಮಯ್ಯಂಗಾರ್ಯರ ಹಿರಿಯ ಮಗನಾಗಿ, ಒಳ್ಳೆಯ ಮಗ,
ಅಣ್ಣ, ಪತಿ, ಅಳಿಯ, ತಂದೆ, ಮಾವ, ಉಪಾಧ್ಯಾಯ ಎನಿಸಿ,
ನಿಷ್ಠಾವಂತ, ಆಚಾರಶೀಲ, ವಿನಯವಂತ ಶ್ರೀವೈಷ್ಣವ ಎನಿಸಿ,
ನಲ್ಲಾನ್ ಚಕ್ರವರ್ತಿ ಆಚಾರ್ಯ ಪರಂಪರೆಯ ಒಂದು ಶಾಖೆಯ
ಆಚಾರ್ಯರಾಗಿದ್ದ ನನ್ನ ತಂದೆ,

**ಹುಲಿಕಲ್ಲು ಹೊಸಮನೆ ಜನಾರ್ದನಯ್ಯಂಗಾರ್**

(೧೮೯೪-೧೯೭೬)

ಮತ್ತು

ಊರಿನಲ್ಲಿ ಸುಪ್ರಸಿದ್ಧ ಪಟ್ಟಾಭಿರಾಮಸ್ವಾಮಿ ದೇವಾಲಯ,
ನದಿಯಲ್ಲಿ ಗಾಯತ್ರಿಶಿಲೆ, ಗೋಗರ್ಭಶಿಲೆ ಇರುವ, ದಕ್ಷಿಣ
ಭಾರತದ ಗಂಗೆ ಎನಿಸಿದ ಕಾವೇರಿ ನದಿಯ ತೀರದಲ್ಲಿರುವ
ಆಚಾರ್ಯ ರಾಮಾನುಜರ ಪಾದಸ್ಪರ್ಶದಿಂದ ಪುನೀತವಾಗಿರುವ,
ರಾಮನಾಥಪುರದ ತುಕ್ಕಡಿ ಕೃಷ್ಣಯ್ಯಂಗಾರ್ಯರ ಮಗಳಾಗಿ, ಒಳ್ಳೆಯ
ಮಗಳು, ಅಕ್ಕ, ಸೊಸೆ, ಪತ್ನಿ, ಓರಗಿತ್ತಿ, ತಾಯಿ ಎನಿಸಿಕೊಂಡು
“ಹಿರಿಯ ಸೊಸೆಯ ಮರಣ ನನ್ನ ಮನೆಯ ಅಸ್ತಿಭಾರವನ್ನೇ
ಕದಲಿಸಿತು’ ಎಂದು ಮಾವ ರಾಮಸ್ವಾಮಯ್ಯಂಗಾರ್ಯರಿಂದ
ಹೊಗಳಿಸಿಕೊಂಡ ನನ್ನ ತಾಯಿ

**ಸೀತಮ್ಮ**

(೧೮೯೮-೧೯೩೧)

**ಇವರಿಗೆ ಕೃತಜ್ಞತೆಯಿಂದ ಅರ್ಪಿಸಿದ ಕಾಣಿಕೆ**

**ಇವರಿಗೆ**

# ಅರಿಕೆ

ದಕ್ಷಿಣ ಭಾರತದ ಆಚಾರ್ಯ ಪರಂಪರೆಯು ಭಾರತದ ಸನಾತನ ಧರ್ಮವನ್ನು ರಕ್ಷಿಸಿ, ಬೆಳೆಸಿ, ಲೋಕೋದ್ಧಾರ ಮಾಡಲು ಕಾರಣವಾಗಿದೆ. ನಮ್ಮ ಧ್ಯೇಯವಾದ ಮೋಕ್ಷ ಪ್ರಾಪ್ತಿಗೆ ವೇದಾಂತ ದರ್ಶನವೇ ನಿಷ್ಕೃಷ್ಟವಾದುದು. ವೇದಾಂತ ದರ್ಶನಕ್ಕೆ ರಾಮಾನುಜರ ಕೊಡುಗೆ ಅಪಾರವಾದುದು. ಇಡೀ ಮಾನವ ಕುಲದ ಉದ್ಧಾರಕ್ಕಾಗಿ ಹಾಗೂ ಮೋಕ್ಷಪ್ರಾಪ್ತಿಗಾಗಿ ಅನುಕಂಪದಿಂದ, ಆಜನ್ಮ ಪರ್ಯಂತ ಶ್ರಮಿಸಿದವರಲ್ಲಿ ರಾಮಾನುಜರು ಅಗ್ರಗಣ್ಯರು.

ವೇದ, ಉಪನಿಷತ್ತು, ಪುರಾಣ, ಆಗಮ, ಕಾವ್ಯ, ಇತಿಹಾಸ, ಎಲ್ಲಕ್ಕೂ ಸಮಾನವಾದ ಪ್ರಾಶಸ್ತ್ಯವನ್ನಿತ್ತು, ಯಾವ ವೇದ ವಾಕ್ಯವನ್ನೂ ಅಮುಖ್ಯವೆಂದು ಕಡೆಗಣಿಸದೆ, ಎಲ್ಲವನ್ನೂ ಮುಖ್ಯವೆಂದೇ ಅಂಗೀಕರಿಸಿ, ಅವುಗಳಲ್ಲಿ ಅಲ್ಲಲ್ಲಿ ಕಾಣುವ ಭೇದ-ಅಭೇದ ಅಥವಾ ವಿರೋಧೋಕ್ತಿಗಳಿಗೆ ಸುಂದರವಾಗಿ ಹೊಂದಿಕೊಳ್ಳುವ ಅರ್ಥವನ್ನು, ಸಮಂಜಸವಾದ ವಿವರಣೆಯನ್ನು ನೀಡಿ, ಯಾವ ವಿಧವಾದ ಸಂದೇಹ - ಅನುಮಾನಗಳಿಗೂ ಎಡೆಯಿಲ್ಲದಂತೆ ಸ್ಥಾಪಿತವಾಗಿರುವ ರಾಮಾನುಜರ ವಿಶಿಷ್ಟಾದ್ವೈತ ವೇದಾಂತ ಉತ್ತಮವಾಗಿದೆ. ಸಹಜವಾಗಿ ಅದ್ವೈತ ಅರ್ಥವನ್ನು ಕೊಡುವ ವೇದೋಕ್ತಿ ಅಥವಾ ಶ್ರುತಿ ವಚನಗಳನ್ನೂ, ಶಬ್ದಾರ್ಥಾನುಸಾರ ದ್ವೈತ ಅರ್ಥವನ್ನು ಕೊಡುವ ಶ್ರುತಿ ವಚನಗಳನ್ನೂ ಒಪ್ಪಿಕೊಂಡು, ಈ ದ್ವೈತ-ಅದ್ವೈತ ಶ್ರುತಿ ವಚನಗಳಿಂದ ಅಭಿವ್ಯಕ್ತವಾದ ಪರಬ್ರಹ್ಮತತ್ತ್ವವನ್ನು, ಉಪನಿಷತ್ತುಗಳಲ್ಲಿ ಉಕ್ತವಾದ ತತ್ತ್ವಗಳೊಂದಿಗೆ ಸಮಂಜಸ, ಸಾಮರಸ್ಯ ಆಗಿರುವಂತೆ ಅರ್ಥಪ್ರಕಾಶಗೊಳಿಸಿ, ಘಟಕ ಶ್ರುತಿ ವಚನಗಳ ಮೂಲಕ ಪರಸ್ಪರ ವಿರೋಧವೆಂದು ತೋರುವ ವೇದಭಾಗವನ್ನು ರಾಮಾನುಜರು ತಮ್ಮ ವಿಶಿಷ್ಟಾದ್ವೈತ ವೇದಾಂತದಲ್ಲಿ ಸಮನ್ವಯಗೊಳಿಸಿದ್ದಾರೆ. ಇದು ಜನಪ್ರಿಯತೆ ಗಳಿಸಿದೆ ಎಂದು ದೇಶ ವಿದೇಶಗಳ ವಿದ್ವಾಂಸರು ಹೇಳಿದ್ದಾರೆ.

ಆದರ್ಶ ಯತಿವರ್ಯರೂ, ಪೂಜ್ಯರೂ, ಮಹಾತ್ಮರೂ, ಆಗಿದ್ದ ಆಚಾರ್ಯ ರಾಮಾನುಜರನ್ನು ಕೊಂಡಾಡಿ, ಸ್ಮರಿಸಿ, ಪೂಜಿಸಿ, ಕೃತಜ್ಞತೆಯನ್ನು ಮತ್ತು ಭಕ್ತಿ ಗೌರವಗಳನ್ನು ಅರ್ಪಿಸುವುದು ಎಲ್ಲ ಶಿಷ್ಯರ ಕರ್ತವ್ಯವಾಗಿದೆ.

ಆದಿಶೇಷನ ಅವತಾರ, ಪರಮಾತ್ಮನ ಸಮ ಎಂದು ಭಾವಿಸಲ್ಪಟ್ಟಿರುವ ವಿಶಿಷ್ಟಾದ್ವೈತದ ವಿಶ್ವಾಚಾರ್ಯ ರಾಮಾನುಜರ ಸರ್ವತೋಮುಖ ಪರಿಚಯ ಮಾಡಿಕೊಡಬೇಕೆಂಬ ಉದ್ದೇಶದಿಂದ ಈ ಕೃತಿಯನ್ನು ಆಚಾರ್ಯರ ೯೮೦ನೆ ತಿರುನಕ್ಷತ್ರದ ವೇಳೆಗೆ ಪ್ರಕಟಿಸಿ ಕಾಣಿಕೆಯಾಗಿ ಅರ್ಪಿಸುತ್ತಿದ್ದೇನೆ.

ಇದರಲ್ಲಿ ರಾಮಾನುಜರ ಸಂಕ್ಷಿಪ್ತ ಜೀವನಚರಿತ್ರೆ, ಅವರು ಸ್ಥಾಪಿಸಿದ ಸಿದ್ಧಾಂತ, ಅವರ ಕೃತಿಗಳು, ಅವರ ಹಿರಿಮೆಯನ್ನು ತೋರಿಸುವ ಅವರ ವಿವಿಧ ಹೆಸರುಗಳು, ಅವರನ್ನು ಕುರಿತು ರಚಿಸಿದ ಸ್ತೋತ್ರಗಳು, ಅಭಿಪ್ರಾಯಗಳು ಇವೆಲ್ಲವನ್ನೂ ಸೇರಿಸಲಾಗಿದೆ. ಲೋಕದ ಜನರಿಗಾಗಿ, ಅವರ ಉನ್ನತಿಗಾಗಿ ಹಾಗೂ ಮೋಕ್ಷವನ್ನು ಪಡೆಯಲು, ಅವರು ಪಟ್ಟ ಶ್ರಮ, ಮಾಡಿರುವ ಸೇವೆ, ತೋರಿಸಿದ ಮಾರ್ಗ ಅದ್ವಿತೀಯ ಆಗಿದೆ. ತಮ್ಮ ವಿಚಾರ, ಆಚಾರ, ಉಚ್ಚಾರಗಳಿಂದ ಧರ್ಮ, ಸಮಾಜ ಎರಡನ್ನೂ ಉದ್ಧರಿಸಿದ ಅವರ ಮಾರ್ಗದಲ್ಲಿ ಹೋಗಿ ತಾವೂ ಉದ್ಧಾರವಾಗುವುದರ ಜೊತೆಗೆ ಸಮಾಜವನ್ನು ಉದ್ಧರಿಸಲು ಓದುಗರು ಶಕ್ತರಾಗುತ್ತಾರೆ ಎಂದು ನಂಬಿದ್ದೇನೆ. ಆಚಾರ್ಯರಲ್ಲಿ ಶ್ರದ್ಧೆ, ಭಕ್ತಿ, ಗೌರವಗಳನ್ನು ಹೊಂದಿರುವವರೆಲ್ಲ ಇದನ್ನು ಓದಿ, ಆಚಾರ್ಯರ, ತನ್ಮೂಲಕ ಭಗವಂತನ ಅನುಗ್ರಹಕ್ಕೆ ಪಾತ್ರರಾಗುತ್ತಾರೆಂದೂ ನಂಬಿದ್ದೇನೆ.

ಇಂತಹ ಪುಸ್ತಕವೊಂದನ್ನು ರಚಿಸಲು ಸಹಾಯ ದೊರಕಿಸಿದ ಗ್ರಂಥಗಳು ಮತ್ತು ಗ್ರಂಥ ಕರ್ತರುಗಳಿಗೆ ನಾನು ಕೃತಜ್ಞನಾಗಿದ್ದೇನೆ. ಇದನ್ನು ಅಲ್ಪಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ರಾಘವನಗರದ, ಟಿಂಬರ್ ಯಾರ್ಡ್ ವಿಸ್ತರಣದಲ್ಲಿರುವ ಇಳಾ ಮುದ್ರಣದ ಮಾಲೀಕರಾದ ಶ್ರೀ ಬಿ.ಗುರುಮೂರ್ತಿ ಮತ್ತು ಪ್ರಬಂಧಕರಾದ ಶ್ರೀ ಬಿ.ಜಿ. ಮಳಲಿಗೌಡರಿಗೂ ಹಾಗೂ ಅಲ್ಲಿನ ಕೆಲಸಗಾರರಿಗೂ ವಂದನೆಗಳು.

ಸೇವಾಕಾಂಕ್ಷಿ

ಮಾರ್ಚ್ ೩೦, ೨೦೦೩ — ಹು.ಜ. ರಾಮಯ್ಯಂಗಾರ್

ಬೆಂಗಳೂರು - ೧೯ — *ಆಧುನಿಕ ಸನಾತನಿ*

# ವಿಷಯ ಸೂಚಿಕೆ

# ೧. ಆಚಾರ್ಯವಂದನೆ

ರಾಮಾನುಜದಯಾಪಾತ್ರಂ ಜ್ಞಾನ ವೈರಾಗ್ಯಭೂಷಣಂ ।
ಶ್ರೀಮದ್ವೇಂಕಟನಾಥಾರ್ಯಂ ವಂದೇ ವೇದಾಂತ ದೇಶಿಕಂ ॥ (ವಡಗಲೆ)

ಶ್ರೀಶೈಲೇಶ ದಯಾಪಾತ್ರಂ ಧೀಭಕ್ತ್ಯಾದಿ ಗುಣಾರ್ಣವಂ ।
ಯತೀಂದ್ರ ಪ್ರಣವಂ ವಂದೇ ರಮ್ಯಜಾಮಾತರಂ ಮುನಿಂ ॥ (ತೆಂಗಲೆ)

ಲಕ್ಷ್ಮೀನಾಥ ಸಮಾರಂಭಾಂ ನಾಥಯಾಮುನಮಧ್ಯಮಾಂ ।
ಅಸ್ಮದಾಚಾರ್ಯಪರ್ಯಂತಾಂ ವಂದೇ ಗುರು ಪರಂಪರಾಂ ॥

ಅಸ್ಮದ್ಗುರು ಸಮಾರಂಭಾಂ ಯತಿಶೇಖರ ಮಧ್ಯಮಾಂ ।
ಲಕ್ಷ್ಮೀವಲ್ಲಭ ಪರ್ಯಂತಾಂ ವಂದೇ ಗುರುಪರಂಪರಾಂ ॥

ಯೋ ನಿತ್ಯಮಚ್ಯುತಪದಾಂಬುಜ ಯುಗ್ಮರುಕ್ಮ
ವ್ಯಾಮೋಹತ ಸ್ತದಿತರಾಣಿತೃಣಾಯಮೇನೇ ।
ಅಸ್ಮದ್ಗುರೋರ್ಭಗವತೋಽಸ್ಯ ದಯೈಕ ಸಿಂಧೋ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೆ ॥

ಮಾತಾಪಿತಾಯುವತಯಸ್ತನಯಾ ವಿಭೂತಿ
ಸ್ಸರ್ವಂಯದೇವ ನಿಯಮೇನ ಮದನ್ವಯಾನಾಂ ।
ಆದ್ಯಸ್ಯನಃ ಕುಲಪತೇರ್ವಕುಳಾಭಿರಾಮಂ
ಶ್ರೀಮತ್ತದಂಘ್ರಿಯುಗಳಂ ಪ್ರಣಮಾಮಿ ಮೂರ್ಧ್ನಾ ॥

ಭೂತಂಸರಶ್ಚ ಮಹದಾಹ್ವಯ ಭಟ್ಟನಾಥ
ಶ್ರೀಭಕ್ತಿಸಾರ ಕುಲಶೇಖರಯೋಗಿವಾಹಾನ್ ।
ಭಕ್ತಾಂಘ್ರಿರೇಣು ಪರಕಾಲ ಯತೀಂದ್ರಮಿಶ್ರಾನ್
ಶ್ರೀಮತ್ಪರಾಂಕುಶಮುನಿಂ ಪ್ರಣತೋಽಸ್ಮಿ ನಿತ್ಯಂ ॥

ಅಸ್ಮದ್ದೇಶಿಕ ಮಸ್ಮದೀಯ ಪರಮಾಚಾರ್ಯನಶೇಷಾನ್‌ಗುರೂನ್
ಶ್ರೀಮಲ್ಲಕ್ಷ್ಮಣ ಯೋಗಿಪುಂಗವ ಮಹಾಪೂರ್ಣೌಮುನಿಂಯಾಮುನಂ ।
ರಾಮಂ ಪದ್ಮವಿಲೋಚನಂ ಮುನಿವರಂ ನಾಥಂ ಶಠದ್ವೇಷಿಣಂ
ಸೇನೇಶಂ ಶ್ರಿಯಮಿಂದಿರಾ ಸಹಚರಂ ನಾರಾಯಣಂ ಸಂಶ್ರಯೇ ॥

ಕನ್ನಡ

ರಾಮಾನುಜರ ದಯೆಗೀಡಹನ ಜ್ಞಾನಕುವೈರಾಗ್ಯಕು ಭೂಷಣನ ।
ಶ್ರೀಮದ್ವೇಂಕಟನಾಥನ ಆರ್ಯನ ವಂದಿಪೆ ವೇದಾಂತ ದೇಶಿಕನ ॥

ಶ್ರೀಶೈಲೇಶರ ದಯೆಗೀಡಹನ ಜ್ಞಾನ ಭಕುತಿ ಮೊದಲಹಗುಣಸಾಗರನ।
ಯತಿವರ ಪ್ರವಣನ ವಂದಿಪೆನು ಚೆಂದದಳಿಯ ಮುನಿಯನ್ನು ॥

ಲಕ್ಷ್ಮೀನಾಥನು ಮೊದಲಾಗಿರಲು ನಾಥಯಾಮುನರು ಮಧ್ಯವಿರೆ ।
ನಮ್ಮಾಚಾರ್ಯರ ಪರಿಯಂತವು ವಂದಿಪೆ ಗುರುಪಂಕ್ತಿಗೆ ನಾನು ॥

ನಮ್ಮ ಗುರು ಮೊದಲಾಗಿಹ ಯತಿಶೇಖರ ನಡುವೊಳಿರಲು ।
ಲಕ್ಷ್ಮೀವಲ್ಲಭ ಕೊನೆಯಲಿಹ ಗುರುಸಾಲಿಗೆ ಎರಗುವೆ ನಾನು ॥

ಯಾವನು ನಿತ್ಯವೂ ಅಚ್ಯುತನಡಿದಾವರೆ ಜೋಡಿಯ ಹೊನ್ನಿನಲಿ
ವ್ಯಾಮೋಹದಿ ಮತ್ತೆಲ್ಲವ ಹುಲ್ಲಿಗೂ ಕೀಳಾಗೆಣಿಸುವನೋ ।
ನಮ್‌ಗುರು ಭಗವಂತನ ಇವನ ದಯೆಗೊಂದೇ ಕಡಲಂತಿಹನ
ರಾಮಾನುಜನ ಚರಣಗಳಂ ಶರಣು ಹೊಂದುವೆನು ॥

ತಾಯಿಯು ತಂದೆಯು ಹೆಂಗಳರು ಮಕ್ಕಳು ಸಿರಿಸಂಪತ್ತು
ಎಲ್ಲವು ಯಾವುದೇ ತಪ್ಪದೆ ನಮ್ಮಯ ಕುಲಜನಕೆ ।
ನಮ್ ಮೊದಲಿಗ ಕುಲಪತಿಯ ಪಗಡೆಯ ಹೂವಿನ ಕಳೆಯೇರುವ
ಸಿರಿಗೂಡಿದ ಅಂತಹ ಅಡಿ ಜೋಡಿಗೆ ಪ್ರಣಮಿಪೆ ತಲೆಬಾಗಿ ॥

ಭೂತಯೋಗಿಯ ಸರೋಮುನಿಯ ಹಿರಿಹುಚ್ಚನ ಭಟ್ಟನಾಥನ
ಸಿರಿಯ ಭಕ್ತಿಸಾರನ ಕುಲಶೇಖರನ ಮುನಿವಾಹನನ ।
ಬಕುತರ ಅಡಿಹುಡಿಯನ ಪರಕಾಲನ ಯತಿವರ ಮಿಶ್ರನ
ಸಿರಿಯಾಂತಹನ ಪರಾಂಕುಶಮುನಿಯ ನಮಿಪೆನು ನಾ ನಿತ್ಯವು ॥

## ೨. ದಿವ್ಯದೇಶ ದೇವತಾ ಪ್ರಾರ್ಥನೆ

ಶ್ರೀರಮಣ ರಂಗಾಧಿರಾಜಗೆ
ಶೌರಿ ಶಾಶ್ವತ ವೆಂಕಟೇಶಗೆ
ವಾರಣಾಧಿಪ ವರದ ಕಾಂಚೀಶಂಗೆ ಪೊಡಮಟ್ಟು ।
ನೀರಜಾಂಬಕ ನಿರುಪಮಧೀರ
ಧೀರೋದ್ಧರಣ ವರ ಯದು
ಧಾರುಣೀಧರ ನಿಲಯ ನಾರಾಯಣಗೆ ವಂದಿಪೆನು ॥

ಶ್ರೀಕಾಂತಂ ಶ್ರೀತರಕ್ಷಣಾಂ ನಿರತನಂಭೋಜಾತ ಪತ್ರೇಕ್ಷಣಂ
ನಾಕಾಧೀಶ್ವರ ಮುಖ್ಯ ದೇವಗಣ ವಂದ್ಯಂ ರಾಕ್ಷಸಾರಾತಿವಿ
ಶ್ವಾಕಾರಂ ಫಣಿರಾಜ ತಲ್ಪಶಯನಂ ಸಂಪಾತ್ಮನಾ ಮದ್ಯಗಂ
ಲೋಕೇಶಂ ವರದನಕ್ಕೆಮಗೆ ಶ್ರೀರಂಗೇಶನೊಲ್ದಾವಗಂ ||

ಶ್ರೀರಾಜದ್ರಾಜಮೌಳಿಶ್ರಿತಪದ ಕಮಲಂ ಸೇಮುಷೀ ಬಂಧುರಸ್ವಾಂ
ತಾ ರೂಢ ಸ್ತೋತ್ರಜಾಲಂ ಸರಸಿಜವದನಂ ಸರ್ವಲೋಕೈಕ ವೀರಂ |
ಕಾರುಣ್ಯ ಸ್ಮೇರನೇತ್ರಂ ಘನರುಚಿ ವಿಲಸದ್ಗಾತ್ರ ಮುರ್ವೀಕಳತ್ರಂ
ಚಾರುಪ್ರೇಂಖಚ್ಚರಿತ್ರಂ ಸಲಹುಗೆ ನಿರತಂ ಹಸ್ತಿ ಶೈಲೇಶ ನೆಮ್ಮಂ ||

ಶ್ರೀ ಮನೋಹರ ಮೂರ್ತಿ ಹೃತ್ಪದ
ತಾಮರಸದೊಳು ನೆಲಸಿ ಮನ್ಮನ
ತಾಮಸವ ಪರಿಹರಿಸಿ ಮನ್ನಿಸಿ ಲೋಕಗಳ ಪೊರೆವಾ |
ತಾಮರಸ ಸುಖನಂತರಾತ್ಮಕ
ತಾಮರಸದಳ ನೇತ್ರಮಂಗಳ
ತಾಮರಸಜಾವರನು ವೆಂಕಟರಮಣಗೆರಗುವೆನು ||

ಶ್ರೀಮಾನಿನ್ಮಾನನಾಂಭೋರುಹ ವಿಕಸನ ಬಾಲಾರ್ಕನಿಂದ್ರಾದಿದೇವ
ಸ್ತೋ ಮೋದ್ಯ ನ್ಮೌಳಿ ರತ್ನಾವಳೀರುಚಿ ವಿಲಸತ್ಪಾದ ಪಾನೀಯ ಜಾತಂ |
ಕಾಮ ಪ್ರೋಲ್ಲಾಸರೂಪಂ ಮುನಿಗಣ ಹೃದಯಾಗಾರ ದಿವ್ಯತ್ಪದೀಪಂ
ಪ್ರೇಮಂ ಬೆತ್ತಾವಗಂ ಯಾದವಗಿರಿಪತಿಯ್ಮೆಶ್ವರ್ಯಮಿತ್ತೋವುಗೆಂದಂ ||

ಶ್ರೀಪತಿಯು ಶಿವನಜರುಗಳನಾ
ನಾಪರಿಯ ಪ್ರತುಮೆಗಳ ನಿರ್ಮಿಸಿ
ಚಾಪಲದಲಾಡಿಸಲು ದಿನರಾತ್ರಿಗಳ ತೆರೆಗಳಲಿ |
ದೀಪಗಳು ಶಶಿರವಿಗಳಗ್ನಿಯ
ಸ್ಥಾಪಿಸಲು ನಾಟಕವನೋಡುವ
ನಾ ಪರಮ ವಿಷ್ಣುವಿನ ಪದಪದ್ಮಗಳಿಗೆರಗುವೆನಾ ||

## ೩. ಆಚಾರ್ಯಾಭಿಮಾನ

ಆಚಾರ್ಯ ಅಥವಾ ಗುರುಗಳಲ್ಲಿ ನಿಷ್ಠೆ ಅಥವಾ ಅಭಿಮಾನ ಹೊಂದಿರುವುದು, ನಂಬಿಕೆ ಮತ್ತು ಸಿದ್ಧಾಂತಗಳ ಸಂಮಿಲನವಾದ ವಿಶಿಷ್ಟಾದ್ವೈತ ವೇದಾಂತದ ವೈಶಿಷ್ಟ್ಯ. ಆಧ್ಯಾತ್ಮಿಕ ಪರಿಪೂರ್ಣತೆ ಮತ್ತು ಪರಮಾತ್ಮನ ಅರಿವು ಪಡೆಯಬೇಕೆನ್ನುವ ವ್ಯಕ್ತಿಯ ಪ್ರಯತ್ನದಲ್ಲಿ ಮಂತ್ರ ಮತ್ತು ಅದರ ಅರ್ಥವನ್ನು ಉಪದೇಶಿಸಿ, ಚೇತನರನ್ನು ಮುಕ್ತಿ ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡುವ ಕಾರ್ಯದಲ್ಲಿ, ಗುರು ಅಥವಾ ಆಚಾರ್ಯನ ಪಾತ್ರವು ಅತ್ಯಂತ ಮಹತ್ವವುಳ್ಳದ್ದು.

ಕಮಲದ ಹೂವಿಗೆ ನೀರು ಇದ್ದಂತೆ, ಜೀವಿಗಳಿಗೆ ಗುರುವಿನ ಸಂಬಂಧವಿರುತ್ತದೆ. ನೀರಿನ ಸಂಪರ್ಕದಲ್ಲಿರುವ ಕಮಲವನ್ನು ಸೂರ್ಯನೇ ಅರಳುವಂತೆ ಮಾಡಿದರೂ ನೀರಿನಿಂದ ಹೊರಬಂದ ಕಮಲವನ್ನು ಅದೇ ಸೂರ್ಯನು ಒಣಗಿಸಿಬಿಡುತ್ತಾನೆ. ಆದ ಕಾರಣ ಪ್ರಾರಬ್ಧವೆಂಬ ಕರ್ಮಕೂಪದಲ್ಲಿ ಮುಳುಗಿರುವ ಜೀವಿಯನ್ನು ಮೇಲಕ್ಕೆ ಎತ್ತುವ ಮಧ್ಯಸ್ಥನೇ ಆಚಾರ್ಯ. ಅಜ್ಞ, ಅಲ್ಪಜ್ಞ ಆಗಿದ್ದು, ಕರ್ಮಜ್ಞಾನ ಭಕ್ತಿಪ್ರಪತ್ತಿ ಮಾರ್ಗಗಳನ್ನು ಸರಿಯಾಗಿ ಅನುಷ್ಠಿಸಲು ಅಶಕ್ತರಾದ ವ್ಯಕ್ತಿಗಳಿಗೆ, ಆಚಾರ್ಯಾನುಗ್ರಹ ಎಂಬ ಐದನೆಯ ಮಾರ್ಗವೇ ಅತ್ಯಂತ ಸರಳ, ಸುಲಭ, ಉತ್ತಮ ಆಗಿರುತ್ತದೆ.

ಗುರುಗಳಿಂದ ಕಲಿತಾಗಲೇ ಜ್ಞಾನವು ಸ್ಪಷ್ಟಗೊಂಡು ಪೂರ್ಣವಾಗುತ್ತದೆ ಎಂದು ಛಾಂದೋಗ್ಯ ಉಪನಿಷತ್ತು ಹೇಳುತ್ತದೆ; ದೇವರನ್ನು ತುಂಬಾ ಪ್ರೀತಿಸಿ, ಗುರುವನ್ನು ದೇವರಂತೆಯೇ ಪ್ರೀತಿಸಿದವನು ಮಾತ್ರ ಶ್ರೇಷ್ಠ ಜ್ಞಾನವನ್ನು ಪಡೆಯಲು ಅರ್ಹ ಎಂದು ಕಠೋಪನಿಷತ್ತು ಸಾರುತ್ತದೆ; ಆಚಾರ್ಯ ಪೂಜೆಯು ಶಿಷ್ಯನಿಗೆ ಇರಲೇಬೇಕಾದ ಉತ್ತಮ ಮನೋಭಾವ ಎಂಬುದಾಗಿ ಭಗವದ್ಗೀತೆ ಹೇಳುತ್ತದೆ; ಗುರುಗಳ ಬಗ್ಗೆ ಭಕ್ತಿ, ವಿಧೇಯತೆ ತೋರಿಸಿರುವ ಕಥೆಗಳು ಪುರಾಣಗಳಲ್ಲಿ ಬಂದಿವೆ; ಗುರುವು ಕಲಿಸದಿದ್ದರೂ, ಗುರುವಿನ ಪ್ರತಿಮೆಯ ಪೂಜೆಯ ಪ್ರಭಾವದಿಂದಲೇ ಗುರುವಿನ ಅನುಗ್ರಹವಾಗಿ ವಿದ್ಯೆ ಸಿದ್ಧಿಸಿತು ಎಂಬುದು ಏಕಲವ್ಯನ ಕಥೆಯಿಂದ ತಿಳಿದುಬರುತ್ತದೆ. ಆದ ಕಾರಣ, ಹಿಂದೂ ಧರ್ಮದಲ್ಲಿ ಶಿಷ್ಯನ ಬುದ್ಧಿ, ಕುಶಲತೆಗಳಿಗಿಂತ ಗುರುವಿನ ನೇರಸಂಪರ್ಕದಿಂದ ಆಗುವ ಪ್ರಭಾವ, ಸ್ಫೂರ್ತಿಗಳೇ ಮುಖ್ಯವಾದುದೆಂದು ಗಣಿಸಲ್ಪಟ್ಟಿದೆ;

ಮುಖ್ಯವಾಗಿ ಯಾರು ಸಕಲಶಾಸ್ತ್ರಗಳ ಅರ್ಥವನ್ನು ಸರಿಯಾಗಿ ತಿಳಿದುಕೊಂಡು, ಸಾರವನ್ನೆಲ್ಲ ಸಂಗ್ರಹಿಸಿ, ತಾವು ಕಲಿತ ವಿದ್ಯೆಯು ಮಾನವಕೋಟಿಯ ಕಲ್ಯಾಣಕ್ಕಾಗಿ ವಿನಿಯೋಗವಾಗಲಿ ಎಂಬ ಸಮುದ್ದೇಶದಿಂದ ಶಿಷ್ಯರಿಗೆ ಸುಲಭವಾದ ತಂತ್ರದಿಂದ ಬೋಧಿಸುವರೋ; ಯಾರು ತನ್ನನ್ನು ಆಶ್ರಯಿಸಿದ ಶಿಷ್ಯರಿಗೆ ಬೋಧಿಸುವುದರಿಂದ ಮಾತ್ರ ತೃಪ್ತರಾಗದೆ, ಲೌಕಿಕರಿಗೂ ಉಪದೇಶಿಸಿ, ಅವರನ್ನು ಸರಿಯಾದ ದಾರಿಗೆ ಎಳೆತಂದು ಸದಾಚಾರದಲ್ಲಿ ನೆಲೆಗೊಳಿಸುವರೋ, ಪರರಿಗೆ ಬೋಧನೆ, ಉಪದೇಶ ಮಾಡುವುದು ಸುಲಭವಾದರೂ, ತಾವು ಸ್ವತಃ ಆಚರಿಸಿ ತೋರಿಸುವುದು ಕಷ್ಟವಾದುದರಿಂದ, ಯಾರು ತಮ್ಮ ನಡೆನುಡಿಗಳಲ್ಲಿ ತಾವು ಉಪದೇಶಿಸುವ ತತ್ತ್ವಗಳೆಲ್ಲವೂ ಮೂರ್ತಿಮತ್ತಾಗಿ ಬಂದಂತೆ ಆದರ್ಶ ಜೀವನದ ಮೇಲ್ಪಂಕ್ತಿಯನ್ನು ಹಾಕಿ ಕೊಡುವರೋ; ಯಾರು ಜ್ಞಾನ ಭಕ್ತಿ ವೈರಾಗ್ಯ ಅನುಷ್ಠಾನ ಇವುಗಳಿಂದ ಕೂಡಿರುವರೋ—ಅಂಥವರೇ ನಿಜವಾದ ಆಚಾರ್ಯರೆಂದು ಕರೆಸಿಕೊಳ್ಳಲು ಯೋಗ್ಯರು, ಅರ್ಹರು ಆಗಿರುತ್ತಾರೆ. ಅಂಥವರು ಮಾತ್ರ ಮಾತೃದೇವೋಭವ, ಪಿತೃದೇವೋಭವ, ಆದನಂತರ ಆಚಾರ್ಯದೇವೋಭವ ಎಂದು ಕರೆಸಿಕೊಳ್ಳಲು ಸಾಧ್ಯವಾಗುತ್ತದೆ.

ಪೂರ್ವಾಚಾರ್ಯರುಗಳಿಂದ ಹರಿದು ಬಂದಿರುವ ಜ್ಞಾನ-ಅನುಭವಗಳ ಪ್ರವಾಹಕ್ಕೆ, ತಮ್ಮ ಜ್ಞಾನ-ಅನುಭವಗಳ ತೊರೆಯನ್ನು ಸೇರಿಸಿ ಅದನ್ನು ಹಿಗ್ಗಿಸಿ, ಶಾಖೆ-ಉಪಶಾಖೆಗಳಾಗಿ

ಕಾವಲೊಡೆಯಿಸುವುದು, ಆಚಾರ್ಯರ ಮುಖ್ಯ ಕರ್ತವ್ಯ. ಆಚಾರ್ಯ ಎನಿಸಿಕೊಂಡವನು ನಿರಹಂಕಾರಿ, ಪರಸಮೃದ್ಧಿ ಪ್ರಿಯ, ಖ್ಯಾತಿಲಾಭ ನಿರಪೇಕ್ಷಕ, ಸಮರ್ಥ ಆಗಿರಬೇಕು. ಶಿಷ್ಯನಾಗಿರುವ ಜೀವಿಯ ವಿಷಯದಲ್ಲಿ ಪೂರ್ಣವಾದ ಕರುಣೆಯನ್ನು ಹೊಂದಿದ್ದು, ಅವನಿಗೆ ಭಗವತ್ಕೃಪೆ ಅಥವಾ ಈಶಾನುಗ್ರಹ ಸಿಗುವಂತೆ ಶಿಫಾರಸು ಮಾಡಿ, ಬೇರ್ಪಟ್ಟ ಜೀವಾತ್ಮ–ಪರಮಾತ್ಮನ ನಡುವಣ ಸೇತುವೆ ಎಂದು ತನ್ನನ್ನು ಭಾವಿಸಿಕೊಂಡು, ಅವರಿಬ್ಬರನ್ನೂ ಒಂದುಗೂಡಿಸುವ ಜವಾಬ್ದಾರಿಯನ್ನು ತಾನೇ ಹೊತ್ತುಕೊಂಡು, ಜೀವಿಯನ್ನು ಗುರಿಯ ಕಡೆಗೆ ಮುನ್ನಡೆಸಬೇಕು.

ಮೂಲ, ದ್ವಯ ಮತ್ತು ಚರಮಶ್ಲೋಕ ಮಂತ್ರಗಳನ್ನು ಆಚಾರ್ಯಪರಾಧೀನನಾಗಿ, ಭಗವಂತನ ಕೈಂಕರ್ಯರೂಪವಾಗಿ, ನಿಸ್ಪೃಹತೆಯಿಂದ, ಉಪದೇಶಿಸುವವನೇ ಆಚಾರ್ಯರಲ್ಲಿ ಶ್ರೇಷ್ಠನಾದವನೆಂದು ಗಣಿಸಬಹುದು. ವೇದಾಂತಾರ್ಥಪ್ರತಿಪಾದಿತ ಜ್ಞಾನವೆಂಬ ದೀಪವು ಆರಿಹೋಗದಂತೆ ನೋಡಿಕೊಂಡು, ಸ್ವಯಂ ಪ್ರಕಾಶನಾಗಿರುವ ಭಗವತ್ಸ್ವರೂಪವನ್ನು ಉಪದೇಶಿಸಿ, ಚೇತನರಲ್ಲಿರುವ ಅಜ್ಞಾನಾಂಧಕಾರವನ್ನು ಹೋಗಲಾಡಿಸುವವರೇ ಸದಾಚಾರ್ಯರು; ವೇದ, ಪ್ರಬಂಧ, ಮಂತ್ರಗಳ ಅರ್ಥವಿಶೇಷ ಇವನ್ನು ವಿವರವಾಗಿ ತಿಳಿಸಿಕೊಟ್ಟು, ಜೀವಾತ್ಮ–ಪರಮಾತ್ಮರ ಸಂಬಂಧವನ್ನು ಬಿಗಿಪಡಿಸಿ, ಚೇತನರನ್ನು ಅರ್ಹರಾಗಿ ಮಾಡುವವರು ಉಪಕಾರಕ ಆಚಾರ್ಯರು; ಸಮಾಶ್ರಯಣ, ಮಂತ್ರೋಪದೇಶಗಳನ್ನು ಮಾಡಿ, ಚೇತನರನ್ನು ಉದ್ಧರಿಸುವವರು ಉತ್ತಾರಕ ಆಚಾರ್ಯರು.

ಆತ್ಮಸಾಕ್ಷಾತ್ಕಾರವೇ ಮಾನವನ ಪರಮ ಗುರಿಯಾಗಿದ್ದ ಕಾಲದಲ್ಲಿ, ಅನುಷ್ಠಾನವೇ ಮುಖ್ಯ ಸಾಧನವಾಗಿದ್ದ ಕಾಲದಲ್ಲಿ, ಆಚಾರ್ಯರು ಶಿಷ್ಯನನ್ನು ಸರಿಯಾಗಿ ಪರೀಕ್ಷಿಸಿ ಉಪದೇಶಿಸುವ ಪದ್ಧತಿ ಇದ್ದಿತು. ಹೇಳಿಕೊಟ್ಟದ್ದನ್ನೆಲ್ಲ ಸರಿಯಾಗಿ ತಿಳಿದುಕೊಳ್ಳುವ, ಅದನ್ನು ಇತರರಿಗೆ ಸರಿಯಾಗಿ ಹೇಳಿಕೊಡುವ ಮಾನಸಿಕ ಶಕ್ತಿ ಇದ್ದವರಿಗೆ ಮಾತ್ರ ಗುರುಗಳ ಉಪದೇಶ, ಅನುಗ್ರಹ ಸಿಗುತ್ತಿತ್ತು. ತಪಸ್ಸು ಭಕ್ತಿ ಇಲ್ಲದವನಿಗೆ, ಭಗವಂತನನ್ನು ಗಾಢವಾಗಿ ಪ್ರೀತಿಸದವನಿಗೆ, ವೇದಗಳನ್ನು ನಂಬದವನಿಗೆ, ಸೋಮಾರಿ, ಅಹಂಕಾರಿ, ಸುಳ್ಳುಗಾರ, ವಂಚಕ, ವಕ್ರಬುದ್ಧಿಯುಳ್ಳವ, ಪರಪೀಡಕ ಆದವರಿಗೆ ಉಪದೇಶಿಸಬಾರದು ಎಂಬ ನಿಯಮವಿದ್ದಿತು. ಈ ಎಲ್ಲ ಕಾರಣಗಳಿಂದ, ಅಚ್ಚಾದ ಪುಸ್ತಕಗಳು ಇಲ್ಲದಿದ್ದ, ಕೆಲವೇ ಹಸ್ತಲಿಖಿತ ಪುಸ್ತಕಗಳು ಇದ್ದ ಹಿಂದಿನ ಕಾಲದಲ್ಲಿ, ಉಪದೇಶವು ರಹಸ್ಯವಾಗಿದ್ದು ಕೆಲವರಿಗೆ ಮಾತ್ರ ಸೀಮಿತವಾಗಿದ್ದಿತು.

ಆಚಾರ್ಯರಾದವರು ತಾವು ಮಾಡಿದ ಕಾರ್ಯಕ್ಕೆ ಪ್ರತಿಫಲವಾಗಿ ಶಿಷ್ಯರಿಂದ ಶುಶ್ರೂಷೆ, ಹಣಗಳನ್ನು ಅಪೇಕ್ಷಿಸಬಾರದು. ಶಿಷ್ಯನು ಒಳ್ಳೆಯ ದಾರಿಗೆ ಬಂದು ಮುಂದುವರೆಯಲಿ ಎಂಬ ದಯಾ ಬುದ್ಧಿಯಿಂದ ಮಾತ್ರ ಉಪದೇಶ ನೀಡಬೇಕು. ಶಿಷ್ಯನು ಉದ್ಧಾರವಾಗುವುದರೊಂದಿಗೆ, ತನಗೆ ಸತ್ಸಂಗ, ಭಗವತ್ಕೈಂಕರ್ಯ ಒದಗಿತೆಂದು ಸಂತೋಷಪಡಬೇಕು. ಹಿರಿಯರಾದ ಪೂರ್ವಾಚಾರ್ಯರ ದಿವ್ಯಾಜ್ಞೆಗಳನ್ನು ಪ್ರಚಾರ ಮಾಡುವ ಕರಣಗಳೇ ತಾವು ಎಂದು ತಿಳಿಯಬೇಕು. ಆದರೆ ತನ್ನ ಶಿಷ್ಯರನ್ನು ಅನುಗ್ರಹಿಸುವಾಗ ತನ್ನ ಆಚಾರ್ಯರೇ ತನ್ನ ಮೂಲಕ ಈ ಶಿಷ್ಯರನ್ನು

ಅನುಗ್ರಹಿಸುತ್ತಿದ್ದಾರೆ, ತಾನು ಯಾವ ತತ್ತ್ವಗಳನ್ನೂ ಕಂಡುಹಿಡಿದಿಲ್ಲ, ತನ್ನ ಎಲ್ಲ ಶಕ್ತಿ-ಸ್ಫೂರ್ತಿಗಳಿಗೆ ತನ್ನ ಆಚಾರ್ಯರೇ ಮೂಲ, ತಾನು ಕೇವಲ ನಿಮಿತ್ತ ಮಾತ್ರ, ಶಿಷ್ಯರನ್ನು ರಕ್ಷಿಸುವುದೆಂದರೆ ತನ್ನ ಸ್ವರೂಪವನ್ನು ರಕ್ಷಿಸಿದಂತೆ, ಎಂದು ಆಚಾರ್ಯನಾದವನು ತಿಳಿಯುವುದು ಶ್ರೀವೈಷ್ಣವ ಧರ್ಮದ ಪರಮ ಲಕ್ಷಣ.

ಆಚಾರ್ಯರು ಭಗವಂತನಿಗೆ ಅತಿ ಹತ್ತಿರದ ವ್ಯಕ್ತಿಗಳು ಹಾಗೂ ಆತನ ಹೃದಯವನ್ನು ಅರಿತ ದಿವ್ಯಜ್ಞಾನಿಗಳು. ಭಗವಂತನ ಕರುಣೆಯು ಆಚಾರ್ಯರುಗಳ ಮೂಲಕ ಪ್ರವಹಿಸಿ, ಅವರುಗಳ ಅನುಷ್ಠಾನ, ಉಪದೇಶ ಮತ್ತು ಕೃತಿಗಳ ಮೂಲಕ ಚೇತನರು ಭಗವತ್ತತ್ತ್ವವನ್ನು ತಿಳಿದುಕೊಳ್ಳುವಂತೆ ಮಾಡಿ ಅವರನ್ನು ಮೇಲಕ್ಕೆ ಎತ್ತುತ್ತದೆ. ಆಚಾರ್ಯರುಗಳ ಸೂಕ್ತಿಯಲ್ಲಿ ಚೇತನರ ಉದ್ಧಾರಕ್ಕೆ ಉಪಯುಕ್ತವಾದ ತತ್ತ್ವಹಿತ ಪುರುಷಾರ್ಥಬೋಧಕ ಗುಣಗಳು ಅಡಗಿರುತ್ತವೆ. ಆದುದರಿಂದಲೇ ಆಚಾರ್ಯನಲ್ಲಿ ಭಕ್ತಿಪೂರ್ವಕವಾದ ಆಶ್ರಯಣವು ಜ್ಞಾನ ಮತ್ತು ಸದ್ಗುಣಗಳನ್ನು ಉತ್ಪಾದಿಸಿ, ಮೋಕ್ಷವನ್ನು ಕೊಡಿಸಬಲ್ಲದು.

ಆದರೂ ಆಚಾರ್ಯನೇ ಶಿಷ್ಯನಿಗೆ ಬೇಕಾದುದೆಲ್ಲವನ್ನೂ ಹೇಳಿಕೊಡಲು ಸಾಧ್ಯವಾಗ ಲಾರದು. ಕಲಿಯುವಿಕೆಯಲ್ಲಿ ಶಿಷ್ಯನ ಪಾತ್ರವೂ ಮಹತ್ತರವಾದದು. ಶಿಷ್ಯನಾದವನು ತನ್ನ ಬುದ್ಧಿಯನ್ನು ಉಪಯೋಗಿಸಿ, ಸಮಾಜವನ್ನು ವೀಕ್ಷಿಸಿ, ಗ್ರಂಥಗಳ ವ್ಯಾಸಂಗ ಮಾಡಿ, ಸತ್ಸಂಗದಲ್ಲಿದ್ದು, ತರ್ಕ ಮಾಡುತ್ತ ಕಲಿಯಬೇಕಾದುದು ಬಹಳವಿದೆ. ಸರ್ವಧರ್ಮಗಳ ಅನುಯಾಯಿಗಳೂ ಒಪ್ಪುವ ಕಠೋರ ಸತ್ಯವನ್ನು ಹೇಳಬಲ್ಲವನು ಮಾತ್ರ ಬ್ರಹ್ಮೋಪಾಸನೆಗೆ ಯೋಗ್ಯನಾದ ಶಿಷ್ಯ ಎಂಬುದು ಪ್ರಾಚೀನ ಗುರುಗಳ ಅಭಿಪ್ರಾಯವಾಗಿದ್ದಿತು. ಪರಿಶುದ್ಧ ಜೀವನವನ್ನು ನಡೆಸಿ, ಗುರುಸೇವೆ ಮಾಡಿ, ಕಠಿಣ ಪರೀಕ್ಷೆಗೊಳಗಾಗಿ, ಶ್ರದ್ಧಾಭಕ್ತಿ ಆಸಕ್ತಿಗಳಿಂದ, ನಿರಹಂಕಾರಿಯಾದ ಶಿಷ್ಯನು ಪ್ರಶ್ನೆಗಳನ್ನು ಕೇಳಿದಾಗ ಮಾತ್ರ ಗುರುವಿನ ಮನಸ್ಸಿನಲ್ಲಿ ಹಳೆಯ ಉಕ್ತಿಗಳಿಗೆ ಹೊಸ ಹೊಸ ಅರ್ಥವಿಶೇಷಗಳು, ಭಾವನೆಗಳು ಸ್ಫುರಿಸುತ್ತವೆ ಎಂಬುದು ಹಿರಿಯರ ಅನುಭವಾಮೃತ. ಗುರುಶಿಷ್ಯರು ತಂದೆ - ಮಕ್ಕಳಂತಿದ್ದು, ಕಲಿವು ಮುಂದುವರೆಯಬೇಕು. ಗುರುಶಿಷ್ಯರಿಬ್ಬರೂ ತಮ್ಮ ತಮ್ಮ ಸ್ವರೂಪವನ್ನು ಬಹು ಎಚ್ಚರಿಕೆಯಿಂದ ರಕ್ಷಿಸಿಕೊಂಡು, ಪರಸ್ಪರ ಹಿತಾಸಕ್ತಿ ಕಾರ್ಯದಲ್ಲಿ ನಿರತರಾಗಿರಬೇಕು ಎಂಬುದು ಉಪನಿಷತ್ತುಗಳಲ್ಲಿ ಕಾಣಬರುವಂತಹ ಗುರುಶಿಷ್ಯ ಸಂಬಂಧ. ಅಂತಹವರು ಇದ್ದಾಗ ಮಾತ್ರ ಶಿಷ್ಯನೂ ಉದ್ಧಾರವಾಗಬಲ್ಲ, ಆಚಾರ್ಯನ ಸ್ವರೂಪವೂ ಸಿದ್ಧಿಸುತ್ತದೆ; ಗುರುಶಿಷ್ಯರಿಬ್ಬರನ್ನೂ ಜೊತೆ ಯಲ್ಲಿ ಕಾಪಾಡಲಿ, ಜೊತೆಯಲ್ಲಿ ಪೋಷಿಸಲಿ, ಜೊತೆಯಲ್ಲಿ ಸಾಮರ್ಥ್ಯವನ್ನುಂಟುಮಾಡಲಿ, ಅಧ್ಯಯನವು ವಿಕಾಸಗೊಳ್ಳಲಿ, ದ್ವೇಷವಿಲ್ಲದಂತೆ ಆಗಲಿ, ಶಾಂತಿ ಇರಲಿ-ಎಂಬುದೇ ಪ್ರಾಚೀನ ಕಾಲದ ಗುರುಕುಲದ ಅಧ್ಯಯನ ಕಾಲದಲ್ಲಿ ಗುರುಶಿಷ್ಯರ ಪ್ರಾರ್ಥನೆ ಆಗಿದ್ದಿತು.

ಶಿಷ್ಯನು ತನ್ನ ಸೇವಾ ಕಾರ್ಯಗಳಿಂದ ಆಚಾರ್ಯನನ್ನು ಸಂತೋಷಪಡಿಸಿ ಜ್ಞಾನವನ್ನು ಗಳಿಸಬೇಕು. ಭಗವತ್ತತ್ತ್ವವನ್ನು ತೋರಿಸಿಕೊಟ್ಟ ಆಚಾರ್ಯನಲ್ಲಿ, ಅಂತಹ ಯೋಗ್ಯ ಆಚಾರ್ಯನನ್ನು ಒದಗಿಸಿಕೊಟ್ಟ ಭಗವಂತನಲ್ಲಿ, ಉಪಕಾರಸ್ಮೃತಿ ಅಥವಾ ಕೃತಜ್ಞತೆ

ಹೊಂದಿರುವುದು ಹಾಗೂ ಅವರನ್ನು ಸ್ತೋತ್ರಮಾಡುವುದು ಯೋಗ್ಯ ಶಿಷ್ಯನ ಲಕ್ಷಣ ಮತ್ತು ಕರ್ತವ್ಯ.

ನಮ್ಮ ಪ್ರಥಮ ಗುರು ಶ್ರೀಮನ್ನಾರಾಯಣನಿಂದ ವಿಶಿಷ್ಟಾದ್ವೈತ ತತ್ತ್ವವೆಂಬ ಆತ್ಮವಿದ್ಯೆಯ ರಹಸ್ಯವನ್ನು ಪಡೆದ ವಿಷ್ಣುಪತ್ನಿ ಶ್ರೀ ಮಹಾಲಕ್ಷ್ಮಿಯೇ ನಮ್ಮ ಆಚಾರ್ಯಪರಂಪರೆಯಲ್ಲಿ ಎರಡನೆಯವಳು. ಮಹಾಲಕ್ಷ್ಮಿಯಿಂದ ವಿಷ್ವಕ್ಸೇನರಿಗೆ, ವಿಷ್ವಕ್ಸೇನರಿಂದ ನಮ್ಮಾಳ್ವಾರರಿಗೆ, ನಮ್ಮಾಳ್ವಾರರಿಂದ ಯೋಗದೆಸೆಯಲ್ಲಿ ನಾಥಮುನಿಗೆ, ನಾಥಮುನಿಗಳಿಂದ ಪುಂಡರೀಕಾಕ್ಷ ರಾಮಮಿಶ್ರರ ಮೂಲಕ ಯಾಮುನರಿಗೆ, ಯಾಮುನರಿಂದ ಮಹಾಪೂರ್ಣರ ಮೂಲಕ ರಾಮಾನುಜರಿಗೆ ಉಪದೇಶಿಸಲ್ಪಟ್ಟು, ನಂತರ ಗುರುಶಿಷ್ಯ ಪರಂಪರೆಯಾಗಿ ಪ್ರವರ್ತಿಸಲ್ಪಟ್ಟು ಬರುತ್ತಿದೆ, ಈ ವಿಶಿಷ್ಟಾದ್ವೈತ ತತ್ತ್ವ. ರಾಮಾನುಜರ ಪಾದಗಳನ್ನು ಆಶ್ರಯಿಸಿದ ಆಚಾರ್ಯರುಗಳನ್ನು, ರಹಸ್ಯಮಂತ್ರಾರ್ಥ, ಶ್ರೀಭಾಷ್ಯ, ಭಗವದ್ವಿಷಯ, ನಲ್ಲಾನ್ ಚಕ್ರವರ್ತಿ, ತಾತಾಚಾರ್ಯ, ಸೋಮಯಾಜಿಯಾಂಡಾನ್, ಯತಿರಾಜಮಠ, ಪರಕಾಲಮಠ, ಅಹೋಬಲ ಮಠ, ಆಂಡವನ್ ಆಶ್ರಮ ಎಂಬೀ ತಮ್ಮತಮ್ಮ ಸಂಪ್ರದಾಯಕ್ಕೆ ಅನುಗುಣವಾಗಿ ತಿಳಿದು ಕೊಂಡು ಅನುಸಂಧಾನ ಮಾಡಬೇಕು. ಗುರುಸ್ಮರಣೆಯಿಂದ ಶಿಷ್ಯರಿಗೆ ಶ್ರೇಯಸ್ಸು ಉಂಟಾಗು ವುದರಿಂದ, ಶಿಷ್ಯರು ತಮ್ಮ ಆಚಾರ್ಯಪರಂಪರೆಯನ್ನು ಸ್ಮರಿಸಿ ಕೊಂಡಾಡುವುದು, ಪ್ರಾಚೀನ ಕಾಲದಿಂದಲೂ, ಬಂದಿರುವ ಸಂಪ್ರದಾಯ.

By the Designing and Directing Power known as Narayana and Mahalakshmi, the vedic religion or Sanatana Dharma, Comprising its Philosophy, Ethics and Rituals, is maintained by Continuous lines of Acharyas, under whose care and activity it has remained vitally one, and unaltered ಎಂದು ಪಾಶ್ಚಾತ್ಯ ವಿದ್ವಾಂಸರು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿರುತ್ತಾರೆ.

## ೪. ರಾಮಾನುಜರ ಜೀವನ - ಸಾಧನೆ

ಅತಿ ಪ್ರಾಚೀನವಾದ ವಿಶಿಷ್ಟಾದ್ವೈತ ಸಿದ್ಧಾಂತವನ್ನು ತಾರ್ಕಿಕವಾಗಿ, ವ್ಯವಸ್ಥಿತ ರೂಪದಲ್ಲಿ, ಯಶಸ್ವಿಯಾಗಿ ಪ್ರವರ್ತನಗೊಳಿಸಿದವರು ರಾಮಾನುಜಾಚಾರ್ಯರು (೧೦೧೭-೧೧೩೭). ಆದಿಶೇಷನ ಅವತಾರವೆನಿಸಿ, ತ್ರೇತಾಯುಗದಲ್ಲಿ ಶ್ರೀರಾಮನ ತಮ್ಮ ಲಕ್ಷ್ಮಣನಾಗಿ, ದ್ವಾಪರಯುಗದಲ್ಲಿ ಶ್ರೀಕೃಷ್ಣನ ಅಣ್ಣ ಬಲರಾಮನಾಗಿ, ಕಲಿಯುಗದಲ್ಲಿ ರಾಮಾನುಜರಾಗಿ ಶ್ರೀಪೆರಂಬೂದೂರ್ ಗ್ರಾಮದಲ್ಲಿ, ಚೈತ್ರ ಮಾಸದಲ್ಲಿ ಶುದ್ಧ ಪಂಚಮಿಯ ದಿನ, ಆರಿದ್ರಾ ನಕ್ಷತ್ರದಲ್ಲಿ ೧೦೧೭ರಲ್ಲಿ ಜನಿಸಿದ ಇವರ ತಂದೆ ಆಸೂರಿ ಕೇಶವ ಸೋಮಯಾಜಿ ದೀಕ್ಷಿತರು ಸರ್ವಕ್ರತು ಎನಿಸಿದ ವೈದಿಕ ಬ್ರಾಹ್ಮಣ. ರಾಮಾನುಜರ ತಾಯಿ ಕಾಂತಿಮತಿ.

ರಾಮಾನುಜರು ಮೊದಲು ತಂದೆಯ ಬಳಿ ಕಲಿತರು. ೧೦೩೩ರಲ್ಲಿ ಅಂದರೆ ೧೬ನೆಯ ವಯಸ್ಸಿನಲ್ಲಿ ತಂಜಮಾಂಬಾಳ್ ಎಂಬ ಸುಂದರ ಕನ್ಯೆಯೊಡನೆ ವಿವಾಹವಾಯಿತು. ತಂದೆಯು

ಮರಣ ಹೊಂದಿದುದರಿಂದ ತಾಯಿ, ಪತ್ನಿಯರೊಡನೆ ರಾಮಾನುಜರು ೧೧೩೪ರಲ್ಲಿ ಕಾಂಚೀಪುರಕ್ಕೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಬಂದು ಅಲ್ಲಿದ್ದ ಅದ್ವೈತಾಚಾರ್ಯರಾದ ಯಾದವ ಪ್ರಕಾಶರ ಬಳಿ ವಿದ್ಯಾಭ್ಯಾಸ ಮಾಡಿದರು. ನಿರ್ಗುಣ ಈಶ್ವರವಾದದ ಗುರುಗಳನ್ನು ಸಗುಣ ಈಶ್ವರವಾದದ ಶಿಷ್ಯ ರಾಮಾನುಜರು ತ್ಯಜಿಸಬೇಕಾಯಿತು. ಆಗ ಅಲ್ಲಿದ್ದ ಯಾಮುನಾಚಾರ್ಯರ ಶಿಷ್ಯ ಕಾಂಚೀಪೂರ್ಣ (ತಿರುಕ್ಕಚ್ಚಿನಂಬಿ)ರನ್ನು ಆಧ್ಯಾತ್ಮಿಕ ಗುರುವಾಗಿ ಸ್ವೀಕರಿಸಿ, ತಮ್ಮ ಸಾಧನೆಗೆ ಹಾಗೂ ಸಿದ್ಧಾಂತದ ಪ್ರಚಾರಕ್ಕೆ ಅಡ್ಡಿಯಾಗಿದ್ದ ಗೃಹಸ್ಥಾಶ್ರಮವನ್ನು ೧೦೪೯ರಲ್ಲಿ ತ್ಯಜಿಸಿ ಕಂಚಿಯ ವರದರಾಜಸ್ವಾಮಿಯ ಸನ್ನಿಧಿಯಲ್ಲಿ ಸಂನ್ಯಾಸ ಸ್ವೀಕರಿಸಿದ ಮಹಾತ್ಮಾಗಿ.

ಆಮೇಲೆ ಯಾಮುನಾಚಾರ್ಯರ ಉಳಿದ ಐವರು ಶಿಷ್ಯರುಗಳಿಂದ ಕಲಿತರು. ಮಾಲಾಧರ (ತಿರುಮಲೈಯಾಂಡಾನ್) ರಿಂದ ದಿವ್ಯ ಪ್ರಬಂಧಗಳ ವಿಶೇಷಾರ್ಥವನ್ನು, ಮಹಾಪೂರ್ಣ (ಪೆರಿಯನಂಬಿ, ಪರಾಂಕುಶದಾಸ)ರಿಂದ ವಿಶಿಷ್ಟಾದ್ವೈತ ತತ್ತ್ವದ ರಹಸ್ಯ ಹಾಗೂ ದ್ವಯ ಮಂತ್ರೋಪದೇಶ, ಶ್ರೀಶೈಲಪೂರ್ಣ (ಪೆರಿಯ ತಿರುಮಲೆನಂಬಿ)ರಿಂದ ರಾಮಾಯಣದ ಗೂಢಾರ್ಥ, ಗೋಷ್ಠಿಪೂರ್ಣ (ತಿರುಕ್ಕೋಟ್ಟಿಯೂರ್ ನಂಬಿ) ರಿಂದ ಮಂತ್ರರತ್ನಗಳ ರಹಸ್ಯಾರ್ಥ, ವರರಂಗನಾಯಕ (ಆಳವಂದಾರಾಳ್ವಾನ್) ರಿಂದ ದಿವ್ಯಪ್ರಬಂಧ, ಆಚಾರ್ಯನಿಷ್ಠೆ ಇವೆಲ್ಲವನ್ನೂ ಕಲಿತು, ತಮ್ಮ ಅನುಷ್ಠಾನದಿಂದ ಜ್ಞಾನಾನುಭವವನ್ನು ದೃಢಪಡಿಸಿಕೊಂಡು ಸಿದ್ಧಾಂತದ ರಕ್ಷಣೆ, ಪ್ರಚಾರಗಳಲ್ಲಿ ತೊಡಗಿದರು. ರಾಮಾನುಜರ ಈ ಮಹಾಕಾರ್ಯದಲ್ಲಿ ಕೂರೇಶ, ದಾಶರಥಿ ಎಂಬ ಇಬ್ಬರು ಪ್ರತಿಭಾವಂತ ಆಪ್ತಶಿಷ್ಯರು ತುಂಬಾ ಸಹಾಯ ಮಾಡಿದರು.

ರಾಮಾನುಜರಿಗಿಂತಲೂ ಹಿಂದೆ ಇದ್ದ ಪೊಯ್‌ಗೈ, ಪೂದತ್ತ, ಪೇಯ್, ತಿರುಮಳಿಶೈ, ಮಧುರಕವಿ, ನಮ್ಮ, ಕುಲಶೇಖರ, ಪೆರಿಯ, ಆಂಡಾಳ್. ತೊಂಡರಡಿಪ್ಪೊಡಿ, ತಿರುಪ್ಪಾಣ, ತಿರುಮಂಗೈ ಎಂಬ ಹನ್ನೆರಡು ಜನ ಆಳ್ವಾರುಗಳು, ನಾಥಮುನಿ, ಯಾಮುನ ಎಂಬಿಬ್ಬರು ಆಚಾರ್ಯರುಗಳು ಈ ಸಿದ್ಧಾಂತಕ್ಕೆ ಹೆಚ್ಚು ಕೊಡುಗೆ ನೀಡಿದ್ದಾರೆ.

ಪ್ರಾಚೀನ ಋಷಿ ಪರಂಪರೆಗೆ ಸೇರಿದ್ದರೂ ಸಹ ರಾಮಾನುಜರು ಕಾಲ ದೇಶ ಪರಿಸ್ಥಿತಿಗಳಿಗೆ ಅನುಗುಣವಾಗಿ ನಡೆದುಕೊಳ್ಳುತ್ತಿದ್ದರು. ಸಂಸ್ಕೃತ, ತಮಿಳು ಎರಡು ಭಾಷೆಗಳಲ್ಲಿಯೂ ಸಿದ್ಧಾಂತಕ್ಕೆ ಆಧಾರವಾದ ಪ್ರಮಾಣ ಗ್ರಂಥಗಳ ನಿರ್ಮಾಣಕ್ಕೆ ಕಾರಣರಾದರು. ಕೂರೇಶರ ಸಹಾಯದಿಂದ ಬ್ರಹ್ಮಸೂತ್ರಗಳಿಗೆ ತಾವೇ ಭಾಷ್ಯವನ್ನು ರಚಿಸಿ ಭಾಷ್ಯಕಾರ ಎನಿಸಿದರು. ಸಂಸ್ಕೃತ ವೇದಾಂತ ಹಾಗೂ ತಮಿಳು ಪ್ರಬಂಧ ಎರಡೂ ಸಮರಸವುಳ್ಳವು ಎಂದು ಬಲವಾಗಿ ಪ್ರತಿಪಾದಿಸಿ ಉಭಯವೇದಾಂತಪ್ರವರ್ತಕ ಎಂಬುದನ್ನು ದೃಢಪಡಿಸಿದರು. ಭಕ್ತಿಪ್ರಧಾನವಾದ ವಿಶಿಷ್ಟಾದ್ವೈತದ ಶ್ರೇಷ್ಠತೆಯನ್ನು ಎತ್ತಿ ತೋರಿಸಿ, ತಮ್ಮ ಗುರುವಾಗಿದ್ದ ಅದ್ವೈತದ ಯಾದವ ಪ್ರಕಾಶರನ್ನು ತಮ್ಮ ಶಿಷ್ಯರಾಗುವಂತೆ ಮಾಡಿದ ಮಹಾಮಹಿಮರು. ಸಂಚಾರ ಸೌಕರ್ಯ ಇಲ್ಲದಿದ್ದ ಆ ಕಾಲದಲ್ಲಿ ದಕ್ಷಿಣ ಹಾಗೂ ಉತ್ತರ ಭಾರತದಲ್ಲಿ ಪ್ರವಾಸ ಮಾಡಿ, ಪವಿತ್ರ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ, ಅಲ್ಲಿನ ದೇವಾಲಯಗಳಲ್ಲಿರುವ ಅರ್ಚಾಮೂರ್ತಿಗಳನ್ನು ಸೇವಿಸಿ, ಅಲ್ಲೆಲ್ಲ ವಿಷ್ಣು ದೇವಾಲಯಗಳ ನಿರ್ಮಾಣಕ್ಕೆ ಸ್ಫೂರ್ತಿ ನೀಡಿ, ೭೪ ಮತಪೀಠಗಳನ್ನು ಸ್ಥಾಪಿಸಿ, ಅವುಗಳಿಗೆ

ಸಿಂಹಾಸನಾಧಿಪತಿಗಳನ್ನು ನೇಮಿಸಿ, ಅವುಗಳನ್ನು ಧಾರ್ಮಿಕ, ನೈತಿಕ, ಸಾಮಾಜಿಕ ಕೇಂದ್ರಗಳನ್ನಾಗಿ ಮಾಡಲು ಶ್ರಮಿಸಿದ ಶ್ರೇಷ್ಠ ಧರ್ಮಸುಧಾರಕರು.

ಪರಂಪರಾಗತವಾದ ಸತ್ಸಂಪ್ರದಾಯ ನಿಷ್ಠರೂ, ಸದಾಚಾರ ಸಂಪನ್ನರೂ, ತತ್ತ್ವಜ್ಞಾನಿಗಳೂ, ವಿವೇಕಿಗಳೂ, ದೈವಭಕ್ತರೂ ಆಗಿದ್ದ ಈ ಮಠಾಧಿಪತಿಗಳ ಹಾಗೂ ಅವರ ಶಿಷ್ಯರ ಖಂಡನ, ಮಂಡನ, ಪರೀಕ್ಷಣ, ವಿಮರ್ಶೆಗಳಿಂದ ರಾಮಾನುಜ ಸಿದ್ಧಾಂತಕ್ಕೆ ನಿಷ್ಪಕ್ಷಪಾತತೆ, ವೈಶಾಲ್ಯತೆ ಬಂದು ಅದು ಬಹುಬೇಗ ದೇಶದಲ್ಲೆಲ್ಲಾ ಹರಡಿತು. ಇವರಲ್ಲದೆ ೭೦೦ ಜೀಯರ್‌ಗಳು, ೧೨೦೦ ಏಕಾಂತಿಗಳು, ೩ ಕೋಟಿ ಅಮ್ಮಂಗಳು ಶ್ರೀವೈಷ್ಣವ ಸಿದ್ಧಾಂತದ ಪ್ರಚಾರದಲ್ಲಿ ತೊಡಗುವಂತೆ ವ್ಯವಸ್ಥೆ ಮಾಡಿದ್ದರು.

ಶ್ರೀಮನ್ನಾರಾಯಣನೇ ನಮ್ಮೆಲ್ಲರ ತಂದೆ. ಶ್ರೀಮಹಾಲಕ್ಷ್ಮಿಯೇ ನಮ್ಮೆಲ್ಲರ ತಾಯಿ. ಮಾನವರೆಲ್ಲರೂ ಅಣ್ಣತಮ್ಮಂದಿರು ಹಾಗೂ ಅಕ್ಕತಂಗಿಯರು, ಭಗವಂತನನ್ನು ನಂಬಿ, ಪ್ರೀತಿಸಿ, ಪೂಜಿಸಿ, ಧ್ಯಾನಿಸಿ, ಅವನಲ್ಲಿ ಪೂರ್ಣವಾಗಿ ಶರಣು ಹೊಕ್ಕವರಿಗೆ ಮುಕ್ತಿ ದೊರಕುವುದು ಖಂಡಿತ ಎಂದು ಸಾರಿದ ಯತಿರಾಜ. ಉಚ್ಚ ಎನಿಸಿದ ಕುಲಗಳ ಸಾಂಪ್ರದಾಯಿಕ ಪ್ರತಿಬಂಧಗಳನ್ನು ಉಳಿಸಿಕೊಂಡು, ಸ್ವರ್ಗ, ಮೋಕ್ಷಗಳನ್ನು ಕೀಳು ಎನಿಸಿಕೊಂಡ ಜಾತಿಯವರಿಗೂ ತೆರೆದಿಡಲು ಶ್ರಮಿಸಿದ ದೀನಬಂಧು. ಸರ್ವಮತ ಸಮಾನತೆ, ಸಮಾಜದ ಹಿತಚಿಂತನೆ ಮುಖ್ಯ ಎಂದು ಹೇಳಿ, ಯಾವುದೇ ವ್ಯಕ್ತಿಯನ್ನು ಅವನ ಜನ್ಮ, ಜಾತಿ, ಕುಲ, ಗೋತ್ರ, ಲಿಂಗ ಇವುಗಳ ನೆಪದಲ್ಲಿ ನಿಜವಾದ ಧರ್ಮಮಾರ್ಗದಿಂದ ದೂರವಿಡುವುದು ಅನ್ಯಾಯ, ನೀಚ ಕುಲದಲ್ಲಿ ಹುಟ್ಟಿದರೂ ಯೋಗ್ಯತೆ ಅರ್ಹತೆ ಇದ್ದಲ್ಲಿ ಶ್ರೇಷ್ಠರೆನಿಸಿಕೊಳ್ಳಲು ಅಡ್ಡಿ-ಆತಂಕಗಳು ಇರಬಾರದು ಎಂದು ಬೋಧಿಸಿ, ಹರಿಜನರನ್ನು ತಿರುಕುಲತ್ತಾರ್ ಎಂದು ಕರೆದು ಗೌರವಿಸಿ, ಮೇಲು ಕೀಳು ಎಂಬ ಭೇದವಿಲ್ಲದೆ ಪಂಚ ಸಂಸ್ಕಾರ ನೀಡಿ, ವಿಷ್ಣುದೇವಾಲಯಗಳಲ್ಲಿ ಅವರ ಪ್ರವೇಶ, ತೀರ್ಥ ಪ್ರಸಾದಗಳಿಗೆ ಅವಕಾಶ ಕಲ್ಪಿಸಿದ ಸಮಾಜಸುಧಾರಕ.

ಅನಾದಿ ಹಾಗೂ ಅನಂತ ಆದ ಭಕ್ತಿ ಪರಂಪರೆಯ ಉತ್ಕೃಷ್ಟತೆಯನ್ನು ಜಗತ್ತಿಗೆ ಸಾರಿದುದಲ್ಲದೆ, ಅದನ್ನು ಜ್ಞಾನದ ಪೀಠದ ಮೇಲೆ ಶಾಶ್ವತವಾಗಿ ಕುಳ್ಳಿರಿಸಿ, ಜ್ಞಾನ ಭಕ್ತಿ ವೈರಾಗ್ಯಗಳ ಸಾಮರಸ್ಯವನ್ನು ಸ್ಥಾಪಿಸಿ, ವ್ಯಕ್ತಿಶೀಲದೊಂದಿಗೆ ವಿಶ್ವಕಲ್ಪನೆಯನ್ನು ಬೋಧಿಸಿದ ದಿವ್ಯಾತ್ಮ, ಬುದ್ಧಿ-ಹೃದಯ ಆದರ್ಶ-ಯಥಾರ್ಥ ಇಹ-ಪರ ಎಲ್ಲದರ ಮಧುರ ಸಮನ್ವಯವನ್ನು ಸಾಧಿಸಿ, ಇಂದ್ರಿಯ ಹಾಗೂ ಆತ್ಮಕಲ್ಯಾಣಗಳಿಗೆ ನೇರವಾಗಿ, ಎಲ್ಲರ ಅನುಭವಕ್ಕೂ ನಿಲುಕುವಂತಹ ಸಿದ್ಧಾಂತವನ್ನು ಸ್ಥಾಪಿಸಿದ ನೇತಾರ.

ಶ್ರೀರಂಗ, ಕಂಚಿ, ಅಹೋಬಲ, ತಿರುಪತಿ, ಮದರಾಸು, ತಿರುವಹೀಂದ್ರಪುರ, ವೀರ ನಾರಾಯಣಪುರ, ಕುಂಭಕೋಣ, ಮಧುರೆ, ತಿರುಕ್ಕುರಂಗಡಿ, ತಿನ್ನವೆಲ್ಲಿ, ತಿರುವನಂತಪುರ, ದ್ವಾರಕ, ಮಥುರಾ, ಬೃಂದಾವನ, ಪುಷ್ಕರ, ಅಯೋಧ್ಯೆ, ಪ್ರಯಾಗ, ಕಾಶಿ, ಬದರಿ, ಶ್ರೀನಗರ, ಜಗನ್ನಾಥ, ರಾಮನಾಥಪುರ, ಸಾಲಿಗ್ರಾಮ, ಬೇಲೂರು, ತೊಂಡನೂರು, ತಿರುನಾರಾಯಣಪುರ, ತಲಕಾಡು, ಶ್ರೀರಂಗಪಟ್ಟಣ, ಕಿರಂಗೂರು - ಇವು ರಾಮಾನುಜರ ಪಾದಸ್ಪರ್ಶದಿಂದ ಪುನೀತವಾದ ಸ್ಥಳಗಳು.

ಇಷ್ಟೆಲ್ಲ ಒಳ್ಳೆಯ ಕೆಲಸಗಳನ್ನು ಮಾಡಿದ ರಾಮಾನುಜರ ಅವತಾರವು, ಮಾಘಮಾಸ, ಶುಕ್ಲಪಕ್ಷ, ದಶಮಿಯಂದು ೧೧೩೭ರಲ್ಲಿ, ೧೨೦ ವರ್ಷವಾದಾಗ ಸಮಾಪ್ತಿಯಾಯಿತು.

* * *

"ಭಗವಂತನಲ್ಲಿಯೇ ಅಡಗಿದ್ದು, ಅವನ ಸಂಕಲ್ಪವಾದಾಗ ಅವನಿಂದ ಹೊರಬಂದು, ಕೊನೆಗೆ ಅವನಲ್ಲಿಯೇ ಸೇರುವ ಈ ಜಗತ್ತು ಮಿಥ್ಯೆ, ಕಲ್ಪಿತ ಆಗಿರದೆ, ಸತ್ಯ, ಶಾಶ್ವತ, ಆಗಿದೆ. ಅನಂತ ಕಲ್ಯಾಣಗುಣಪರಿಪೂರ್ಣನೂ, ಲಕ್ಷ್ಮೀಪತಿಯೂ ಆದ ನಾರಾಯಣನೇ ಈ ಜಗತ್ತಿಗೆ ಅಧಿಪತಿ, ಅವರೇ ಪರಬ್ರಹ್ಮ. ಅವನು ಎಲ್ಲ ಚರಾಚರ ವಸ್ತುಗಳನ್ನೂ ತನ್ನ ಶರೀರವಾಗಿ ಧರಿಸಿದ್ದಾನೆ. ದೇಹದ ಕಾರ್ಯಗಳು ಜೀವಿಯ ಸುಖ ಸಂತೋಷಗಳಿಗಾಗಿ ಇರುವಂತೆಯೇ ಈ ಜೀವಜಗತ್ತುಗಳೂ ಪರಮಾತ್ಮನ ನಲುಮಾಗಿಯೇ ಇವೆ. ತನ್ನಿಂದ ಬೇರೆಯಾಗಿರುವ, ತನ್ನ ದೇಹವಾದ, ಈ ಪ್ರಪಂಚದ ಸಕಲ ಪ್ರಾಣಿಗಳೂ ಪರಸ್ಪರ ಅನುಕೂಲದಲ್ಲಿರಬೇಕು ಎಂಬುದು ಅವನ ಅಪೇಕ್ಷೆ. ಎಲ್ಲರೂ ಇಲ್ಲಿ ಚೆನ್ನಾಗಿ, ಸಂತೋಷ ಸಾಮರಸ್ಯಗಳಿಂದ ಬಾಳಬೇಕು. ನಿಸ್ವಾರ್ಥ ಮನೋಭಾವದಿಂದ, ಯಾವ ಫಲಾಪೇಕ್ಷೆಯೂ ಇಲ್ಲದೆ, ಸಮಾಜಸೇವೆಗೆ ತನುಮನಧನಗಳನ್ನು ಒಪ್ಪಿಸಲು ಸದಾ ಸಿದ್ಧರಿರಬೇಕು. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ನಡೆಸುವುದು ಭಗವಂತನ ಲೀಲೆ.

"ಸರ್ವೇಶ್ವರನ ನಿಯಮನಗಳನ್ನು ಉಲ್ಲಂಘಿಸಿ ನಡೆದುಕೊಂಡ ಕಾರಣದಿಂದಲೇ ಉಂಟಾದ ಸಂಸಾರವು ಅಂದರೆ ಹುಟ್ಟು ಸಾವು ಸತ್ಯವಾದುದು. ತನ್ನನ್ನು ಆಶ್ರಯಿಸಿದ ಜೀವರಾಶಿಯನ್ನು ಸಂಸಾರ ಬಂಧನದಿಂದ ಬಿಡುಗಡೆ ಮಾಡಿ, ನಿತ್ಯಾನಂದ ಸ್ವರೂಪದ ಮುಕ್ತಿಯನ್ನು ಒದಗಿಸುವವನು ಆತನೇ. ಪ್ರಕೃತಿ ಮಂಡಲದ ಸಂಪರ್ಕವಿಲ್ಲದ ಪರಮಪದ ಅಥವಾ ವೈಕುಂಠದಲ್ಲಿ ಮುಕ್ತಿಯ ಸ್ಥಾನವೊಂದಿದೆ. ಆ ಪರಬ್ರಹ್ಮನ ಅನುಭವವೇ ಪರಮಪುರುಷನ ಪ್ರಾಪ್ತಿ. ಆತನ ಪ್ರಾಪ್ತಿಗೆ ಭಕ್ತಿಯೇ ಪರಮೋಪಾಯ. ಅದಕ್ಕೆ ಅಡ್ಡಿಯಾಗಿರುವ ಹಲವಾರು ತೊಡಕುಗಳು ನಿವಾರಣೆಯಾಗಬೇಕಾದರೆ, ಆತನ ಚರಣಾರವಿಂದವನ್ನು ಮರೆಹೋಗುವುದೇ ಏಕೈಕ ಮಾರ್ಗ. ವೇದೋಪನಿಷತ್ತುಗಳು, ಸ್ಮೃತಿ ಪುರಾಣಾಗಮೇತಿಹಾಸಗಳು ಇದನ್ನೇ ಪ್ರತಿಪಾದಿಸುತ್ತವೆ" - ಇದು ರಾಮಾನುಜರ ಅಭಿಪ್ರಾಯ.

"ಶ್ರೀಲಕ್ಷ್ಮೀನಾರಾಯಣನೇ ಪರತತ್ತ್ವ. ಅವನೇ ನಮ್ಮೆಲ್ಲರ ತಂದೆ. ಆತನ ವಕ್ಷಸ್ಥಲದಲ್ಲಿರುವ ಶ್ರೀಮಹಾಲಕ್ಷ್ಮಿಯೇ ನಮ್ಮೆಲ್ಲರ ತಾಯಿ. ನಾವೆಲ್ಲರೂ ಅಣ್ಣತಮ್ಮಂದಿರು ಹಾಗೂ ಅಕ್ಕತಂಗಿಯರು. ಚೇತನ ಅಚೇತನಗಳೆಲ್ಲವೂ ಅವನಿಗೆ ಅಧೀನವಾದುವು. ಚೇತನರೆನಿಸಿದ ನಾವೆಲ್ಲ ಅವನ ಕಿಂಕರರು. ಇಡೀ ಜಗತ್ತೇ ಅವನ ಶರೀರವಾಗಿರುವುದರಿಂದ, ಶರೀರದಲ್ಲಿನ ಯಾವುದೇ ಅವಯವಕ್ಕೆ ನೋವಾದರೂ, ಅದರಲ್ಲಿ ನೆಲೆಸಿರುವ ಅಂತರಾತ್ಮನಿಗೆ ಸಹ್ಯವಾಗದು. ಯಾವುದೇ ಪ್ರಾಣಿಮಾತ್ರಕ್ಕೆ ನಾವು ದುಃಖ, ನೋವು, ದ್ರೋಹ ಉಂಟು ಮಾಡಿದರೆ, ಅದು ಅವುಗಳಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವ ಪರಮಾತ್ಮನಿಗೇ ಮಾಡಿದಂತೆ. ಮಾನವನು ತನ್ನ ಆತ್ಮೋನ್ನತಿ ಮತ್ತು ಶಾಶ್ವತ ಸುಖವಾದ ಮೋಕ್ಷ ಇವೆರಡನ್ನೂ ಪಡೆಯಲು,

ಶ್ರೀಮನ್ನಾರಾಯಣನಲ್ಲಿ ದೃಢವಾದ ವಿಶ್ವಾಸಪೂರ್ವಕ ಶರಣಾಗತಿಯಲ್ಲದೆ ಬೇರೆ ಗತಿಯಿಲ್ಲ" - ಇದು ರಾಮಾನುಜರ ಉಪದೇಶ.

"ಸರ್ವಕಾಲದಲ್ಲಿಯೂ ದ್ವಯ ಮಂತ್ರೋಚ್ಚಾರಣೆ ಮಾಡುತ್ತ, ಅದರ ಒಳಾರ್ಥವನ್ನು ಅನುಸಂಧಾನ ಮಾಡಬೇಕು.

"ಶ್ರೀಭಾಷ್ಯ ಮತ್ತು ದಿವ್ಯ ಪ್ರಬಂಧಗಳನ್ನು ಮನನ ಮಾಡಬೇಕು ಹಾಗೂ ಇಚ್ಛೆ ಇದ್ದವರಿಗೆ ಅದನ್ನು ಬೋಧಿಸಬೇಕು. ದಿವ್ಯದೇಶಗಳಲ್ಲಿ ವಾಸಿಸಿ, ಅಲ್ಲಿನ ದೇವಾಲಯಗಳಲ್ಲಿ ದೀಪ, ಧೂಪ, ಮಾಲೆ, ನೈವೇದ್ಯ ಆದಿಗಳನ್ನು ಸಮರ್ಪಿಸುವ ಕೈಂಕರ್ಯಗಳನ್ನು ಮಾಡಬೇಕು.

"ಶ್ರೀವೈಷ್ಣವ ಸಿದ್ಧಾಂತವನ್ನು ಸರಿಯಾಗಿ ಅರಿತು ಆಚರಿಸುವ ಶ್ರೀವೈಷ್ಣವರ ಅಭಿಮಾನಕ್ಕೆ ಪಾತ್ರರಾಗಲು ಯತ್ನಿಸಬೇಕು. ಅನುಕೂಲರಾದ ಶ್ರೀವೈಷ್ಣವರನ್ನು ಕಂಡಾಗ, ಮಂದಮಾರುತ, ಬೆಳದಿಂಗಳು, ಅರಳಿದ ಹೂ; ಇವುಗಳನ್ನು ಕಂಡಂತೆ ಸಂತೋಷ ಪಡಬೇಕು; ಪ್ರತಿಕೂಲರಾದ ಅಂದರೆ ಭಗವಂತ - ಭಾಗವತರನ್ನು ದ್ವೇಷಿಸುವವರನ್ನು ಕಂಡಾಗ ಬೆಂಕಿ, ಹಾವು ಇವುಗಳನ್ನು ಕಂಡಂತೆ ಭಯಪಟ್ಟು ದೂರ ಸರಿಯಬೇಕು; ಪ್ರೀತಿಸದ ಅಥವಾ ದ್ವೇಷಿಸದ ಇತರ ಸಂಸಾರಿಗಳನ್ನು ಕಂಡಾಗ ಕಲ್ಲು, ಮರ ಇವನ್ನು ಕಂಡಂತೆ ಉದಾಸೀನರಾಗಿರಬೇಕು." ಇದು ರಾಮಾನುಜರ ದಿವ್ಯಾಜ್ಞೆ.

ಸಂಗ್ರಹಣ, ಸಂಸ್ಕರಣ. ಸ್ಥಿರೀಕರಣ, ಪ್ರಸರಣ ಇವು ರಾಮಾನುಜರ ಗೆಲುವಿನ ಗುಟ್ಟು. ಆತ್ಮಪೂರ್ವವಾದ ಜ್ಞಾನ ಭಕ್ತಿ ವೈರಾಗ್ಯ, ಭವ್ಯ ಹಾಗೂ ಉದಾರ ಆದ ಸಮನ್ವಯ ದೃಷ್ಟಿ, ಕಣ್ಣಿಗೆ ಕಾಣಿಸಿಕೊಂಡವರೆಲ್ಲರನ್ನೂ ಸಲಹಬೇಕೆಂಬ ಕರುಣಾರ್ದ್ರ ಹೃದಯ, ನಿಜವಾದ ತತ್ತ್ವಹಿತ ಪುರುಷಾರ್ಥಸ್ವರೂಪವನ್ನು ತಿಳಿಸಿ ಜನರ ವಿಪರೀತ ಪ್ರವೃತ್ತಿಯನ್ನು ತಡೆಯಬೇಕೆಂಬ ಉತ್ಕಟೇಚ್ಛೆ, ಶಿಥಿಲವಾಗಿದ್ದ ವಿಶಿಷ್ಟಾದ್ವೈತ ಸಂಪ್ರದಾಯ ಹಾಗೂ ಶ್ರೀವೈಷ್ಣವ ಸಮಾಜ ಎರಡನ್ನೂ ಚೆನ್ನಾಗಿ ಸಂಘಟಿಸಬೇಕೆಂಬ ದೃಢನಿರ್ಧಾರ, ಎಂಥವರ ಹೃದಯವನ್ನು ಪರಿವರ್ತನೆಗೊಳಿಸಬಲ್ಲ ಸಹಜ ಸುಂದರ ಗಂಭೀರ ಯಥಾವಸ್ಥಿತ ವಾಕ್ಸಂಪತ್ತು, ಪರಿಶುದ್ಧ, ಭಾವಪೂರ್ಣ, ನಿಷ್ಕಪಟ, ಸಂತೋಷ ಜನಕ ವ್ಯಕ್ತಿ ಜೀವನ - ಇವು ರಾಮಾನುಜರ ವೈಶಿಷ್ಟ್ಯ.

ಸಾಮಂಜಸ್ಯವನ್ನು ಕಂಡುಕೊಳ್ಳಲು ಕಷ್ಟವಾಗಿರುವ ವೇದಗಳಲ್ಲಿನ ಕರ್ಮಕಾಂಡ ಮತ್ತು ಜ್ಞಾನಕಾಂಡಗಳು, ಚತುರ್ವಿಧ ಪುರುಷಾರ್ಥಗಳು, ನಾಲ್ಕು ವರ್ಣಾಶ್ರಮಗಳು, ಸಿಕ್ಕುಸಿಕ್ಕಾಗಿ ಕಾಣುವ ಶ್ರುತಿ ಸ್ಮೃತಿ ಪುರಾಣಗಳು, ಸಂಪ್ರದಾಯಗಳು, ಇವೆಲ್ಲವನ್ನೂ ಸಮಗ್ರವಾಗಿ ನೋಡಿ, ಅತಿಯಾದ ಸೂಕ್ಷ್ಮಬುದ್ಧಿಯಿಂದ ಅವೆಲ್ಲವನ್ನೂ ಸಮನ್ವಯ ಮಾಡಿ, ಜ್ಞಾನಿ ಭಕ್ತ ವಿರಕ್ತರಲ್ಲಿ ಅಗ್ರೇಸರರಾಗಿದ್ದ, ಸಾವಿರಾರು ವರ್ಷಗಳಿಂದಲೂ ಮುಮುಕ್ಷುಗಳನ್ನು ಬ್ರಹ್ಮಾನಂದಸಾಗರದಲ್ಲಿ ಮುಳುಗಿಸುತ್ತಿರುವ, ಪ್ರಸ್ಥಾನತ್ರಯಗಳಿಗೆ ಭಾಷ್ಯವನ್ನು ರಚಿಸಿ, ಭಾರತದಲ್ಲೆಲ್ಲಾ ಕಾಲುನಡಿಗೆ ಯಲ್ಲಿ ಸಂಚರಿಸಿ, ಜನತೆಗೆ ಮಾರ್ಗದರ್ಶನ ಮಾಡಿರುವ ಶ್ರೇಷ್ಠ ವ್ಯಕ್ತಿಗಳು ವಿಶಿಷ್ಟಾದ್ವೈತದ ವಿಶ್ವಾಚಾರ್ಯ ರಾಮಾನುಜರು.

"ನಡೆದಾಡುವ ಧರ್ಮದೇವತೆ ಎನಿಸಿದ್ದ ಶ್ರೀರಾಮನನ್ನೇ ಅನುಸರಿಸಿದ ರಾಮಾನುಜಾಚಾರ್ಯರ ಜನ್ಮೋದ್ದೇಶ ಧರ್ಮಸ್ಥಾಪನೆ, ಧರ್ಮಾನುಸರಣೆ, ಧರ್ಮೋಪದೇಶ, ಧರ್ಮಪ್ರಚಾರ. ಅದ್ವೈತಗುರು ಯಾದವಪ್ರಕಾಶರಲ್ಲಿ ಕಂಡ ವಿಪರೀತ ಅರ್ಥವು ರಾಮಾನುಜರನ್ನು ಇಡೀ ವೇದಾಂತವನ್ನೇ ಪುನರಾವಲೋಕನ ಮಾಡಲು ಪ್ರೇರೇಪಿಸಿತು. ಬಹುದೊಡ್ಡ ವಿಮರ್ಶಕರಾದ ರಾಮಾನುಜರ ಸಹೃದಯತೆ, ಸನ್ನಡತೆ, ಉದಾರತೆ ಎಲ್ಲರನ್ನೂ ಗೆದ್ದಿತು. ಮುಂದೆ ಬಂದ ಬಸವಣ್ಣ, ಮಧ್ವಾಚಾರ್ಯ, ಉಳಿದ ಆಚಾರ್ಯರು, ಶ್ರೀರಾಮಕೃಷ್ಣ, ಯೇಸುಕ್ರಿಸ್ತ, ಪೈಗಂಬರ್ ಮಹಮ್ಮದ್ ಇವರೆಲ್ಲರೂ ತುಳಿದ ಹಾದಿ ರಾಮಾನುಜರ ಭಕ್ತಿಮಂಥ. ಜನಸಾಮಾನ್ಯರ ಸ್ಪಂದನದ ಸವಿದನಿಯಾಗಿ, ಸಹೃದಯಭಾವವಾಗಿ, ತೆರೆದ ತೆಕ್ಕೆಯಲ್ಲಿ ಬಳಿಬಂದವರನ್ನೆಲ್ಲಾ ತಬ್ಬಿಕೊಂಡು, ನೂರಾರು ಶಾಖೆಗಳು ಸಂಗಮಿಸಿ ಸಮುದ್ರ ಸೇರುವ ಜಂಗಮಗಂಗೆಯಾದರು ಶ್ರೀರಾಮಾನುಜರು. ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಅರ್ಚಿಸಬೇಕು, ಧ್ಯಾನಿಸಬೇಕು, ಅನನ್ಯಭಕ್ತಿ ಅಥವಾ ಉಪಾಸನೆ ಮಾಡಬೇಕು ಎಂಬ ರಾಮಾನುಜರ ಚಿಂತನೆ ಅತ್ಯಂತ ಸರಳ, ಸರ್ವಕಾಲ, ಸರ್ವದೃಶ್ಯ ಆದುದು. ರಾಮಾನುಜರ ಭಕ್ತಿ ಸಿದ್ಧಾಂತವನ್ನು ಒಪ್ಪುವುದೇ ಲೋಕನೀತಿ, ಜನನೀತಿ, ಸರ್ವವೇದ್ಯ, ಸರ್ವಕಾಲವೇದ್ಯ" ಇದು ಭಕ್ತಿ ರಾಜ್ಯದ ರಾಜ, ಶ್ರೇಷ್ಠ ಯತಿರಾಜ ರಾಮಾನುಜರ ವಿಶೇಷತೆ.

*-ಸುಜನಾ (ಎಸ್. ನಾರಾಯಣಶೆಟ್ಟಿ)*

"ಭಗವದನುರಾಗ ದೀಪ್ತರೂ ಉದಾರರೂ ಸಾತ್ವಿಕರೂ ಸೌಮ್ಯರೂ ಆಗಿದ್ದು, ಭಾರತೀಯ ಧರ್ಮದ ಮೇಲೆ ಅಸಾಧಾರಣ ಪರಿಣಾಮ ಉಂಟು ಮಾಡಿದರು. ವೈದಿಕ ಧರ್ಮಪ್ರತಿಪಾದಕರಾಗಿ, ಸನಾತನಿಗಳ ಕುಟುಂಬದಲ್ಲಿ ಜನಿಸಿದರೂ ವರ್ಣಾಶ್ರಮದ ತೀಕ್ಷ್ಣತೆಯನ್ನು ನಿವಾರಿಸಿ ಅದಕ್ಕೆ ಸೌಮ್ಯಕಾಂತಿಯನ್ನು ನೀಡಿದರು. ವೈದಿಕ ಧರ್ಮದ ಅನುಯಾಯಿ ಆಗಿದ್ದುಕೊಂಡೇ ಅದಕ್ಕೆ ಅಪೂರ್ವ ಉದಾತ್ತತೆಯನ್ನು ನೀಡಿದ ಸೌಮ್ಯ ಕ್ರಾಂತಿಕಾರರಾಗಿದ್ದರು. ಸೃಷ್ಟಿಯೆಲ್ಲವನ್ನೂ ಭಗವಂತನ ದೇಹವೆಂದು ಒಪ್ಪಿಕೊಂಡು, ಈ ಲೋಕವನ್ನು ರಾಗದ್ವೇಷ ರಹಿತವಾಗಿ, ಸುಂದರವಾಗಿ ಕಾಣುವ ನೋಟವನ್ನು ಕೊಟ್ಟರು. ಸೃಷ್ಟಿಕರ್ತನನ್ನು ತಂದೆ, ಭಕ್ತವತ್ಸಲ ಎಂದು ಕಲ್ಪಿಸಿ, ಅವನನ್ನು ಜೀವಿಗಳ ಉದ್ಧಾರದ ಹೊಣೆ ಹೊತ್ತವನನ್ನಾಗಿ ಮಾಡಿ ಮೃದುವಾಗಿಸಿದರು. ಸೃಷ್ಟಿಯ ಚರಾಚರವೆಲ್ಲವೂ ಭಗವಂತನ ಶರೀರವಾಗಿದೆ ಎನ್ನುವ ದರ್ಶನವನ್ನಿತ್ತು, ಅದನ್ನು ಕೆಡಿಸಬಾರದೆಂಬ ಹೊಣೆ ಹಾಗೂ ಪ್ರೀತಿಸಬೇಕೆಂಬ ಕರ್ತವ್ಯ ಎಂಬೆರಡು ಜಾಗೃತಿಯನ್ನು ಕೈಮುಗಿದುಕೊಂಡೇ ಮೂಡಿಸಿದರು. ಹನ್ನೊಂದನೆಯ ಶತಮಾನದಲ್ಲಿಯೇ ಅಸ್ಪೃಶ್ಯರು ಎನಿಸಿಕೊಂಡ ದಲಿತರಿಗೂ ಮೇಲುಕೋಟೆಯ ತಿರುನಾರಾಯಣಸ್ವಾಮಿಯ ದೇವಾಲಯದೊಳಕ್ಕೆ ವರ್ಷದಲ್ಲಿ ಮೂರುದಿನವಾದರೂ ಪ್ರವೇಶ ಸಿಗುವಂತಹ ವ್ಯವಸ್ಥೆ ಮಾಡಿದ ಮಹಾನ್ ಕ್ರಾಂತಿಕಾರ ಎನಿಸಿದರು. ಸಂಸ್ಕೃತದ ವೇದ, ಉಪನಿಷತ್ತು, ಬ್ರಹ್ಮಸೂತ್ರಗಳಿಗೆ ನೀಡಿರುವ ಸ್ಥಾನ-ಗೌರವ ಗಳನ್ನೇ ಆಳ್ವಾರುಗಳ ತಮಿಳು ಪ್ರಬಂಧಕ್ಕೂ ನೀಡಿದುದಲ್ಲದೆ, ವೈಷ್ಣವ ದೇವಾಲಯಗಳಲ್ಲಿ ವೇದ ಮಂತ್ರಗಳ ಪಠಣಕ್ಕೆ ನೀಡುವ ಪ್ರಾಧಾನ್ಯಕ್ಕೆ ಸಮನಾದ ಸ್ಥಾನಮಾನ ದ್ರಾವಿಡ ಪ್ರಬಂಧಗಳ ಗಾಯನಕ್ಕೂ ಸಿಗುವಂತೆ ಮಾಡಿದರು." -ಇದು ರಾಮಾನುಜರ ಹಿರಿಮೆ.

***-ಪಾವಗಡ ಪ್ರಕಾಶ ರಾವ್***

The Ordinary meaning of Acharya is Teacher. He alone who writes a Commentary on the Prasthana Trayi of the three authoritative texts, namely the upanishads, the Brahmasutra and the Bhagavadgita and works out a Cogent philosophy is an Acharya. Shankara, Ramanuja and Madhwa created the tradition of Acharya.

These Acharyas were philosophers of life. They thought interms of the whole of human life as being an opportunity to realise the ultimate truth. What they attempted to was harmony in thought, word and deed based on the inner realisation of the spirit. Theirs was an attempt to translate into thought, word and deed their spiritual experience. Theirs was a supreme effort, subject to the limitations of body and mind, of the social conditions and environment, to rationalise in thought, to express in words, and to concretise in action and experience which in its very nature is mystical. So they became not only sources of logical thought but also of ideal expression and ethical action. These Acharyas Concentrated on the three tired achievement of spriritual experience National and philosophical expression and organisational set up covering the whole of India. In the very process of understanding and experiencing the deep meaning of the sacred texts, they have discovered new horizons which gave freshness and new vigour to the seemingly old truths. The emphasis given to bhakthi or devotion, the prominence given to daily discipline and the principle of dedication of every act to God have enriched truly religious life and made it easier for the common man to tread the path of God.

*- R.R. Diwakar*

A study of the life, teachings and actions of Sri Ramanuja, a true and great secular reformer whose thought, speech and action was great will show that a truly sincere secularist interested in eradicating the evils in society need not be an atheist or nonbeliever nor is it necessary to hate or debase Hinduism, to prove one's secular credentials.

*-T. Chellaswami*

The differences in various systems of philosophy we find have arisen because of the interpretation given for the scriptural statements by scholars and Acharyas. When there was an absolute need for clarity in respect of vishishtadvaita, it was Ramanuja who, based on the very texts on which other spiritual leaders had also spelt out their views, established his school of thought, clearing certain misconceptions. The most important aspect he had emphasised is the validity of Prapathi or Saranagathi as the easiest and simplest method to avoid rebirths and remain for ever in the moksha samrajya, attending on God. For him the world is real and Lord Narayana

the supreme force, is full of auspicious qualities and without any blemish. Several scholars have written books on the life and works of Ramanuja, his greatness and his clear elucidation of the vishishtadvaita principles.

- *D.V. Vasudevan*

## ೫. ರಾಮಾನುಜರ ಕೃತಿಗಳು

೧. **ಶ್ರೀಭಾಷ್ಯ :** ಶಿಷ್ಯ ಕೂರೇಶ ಅಥವಾ ಶ್ರೀವತ್ಸಾಂಕಮಿಶ್ರರ ಸಹಾಯದಿಂದ ಬೋಧಾಯನ ವೃತ್ತಿಯನ್ನು ಅವಲೋಕಿಸಿ, ವ್ಯಾಸರ ಬ್ರಹ್ಮಸೂತ್ರಗಳಿಗೆ ವಿಶಿಷ್ಟಾದ್ವೈತ ಪರವಾಗಿ ಬರೆದ ವಿಸ್ತಾರವಾದ ಭಾಷ್ಯವೇ ಶ್ರೀಭಾಷ್ಯ. ಇದರಲ್ಲಿ ಸಂಪ್ರದಾಯ ವಿರುದ್ಧವಾದ ನೂತನ ಅರ್ಥಕಲ್ಪನೆ ಇರುವುದರ ಬದಲು, ಸಂಪ್ರದಾಯದ ಜಾಡನ್ನೇ ಹಿಡಿದ ಹೊಸರೀತಿಯಲ್ಲಿ ಹಳೆಯ ಅರ್ಥವನ್ನು ಸಮಗ್ರವಾಗಿ ಸಮನ್ವಯಗೊಳಿಸಲಾಗಿದೆ. ಪರಬ್ರಹ್ಮನು ಯಾರು, ಆತನಿಂದ ಸೃಷ್ಟಿಯಾದ ಜೀವಾತ್ಮನು, ಆ ಪರತತ್ತ್ವವನ್ನು ಹೇಗೆ ಸಾಕ್ಷಾತ್ಕರಿಸಿಕೊಂಡು ಮುಕ್ತಿಯನ್ನು ಪಡೆಯಬಹುದು ಎಂಬುದು ವಿವರಿಸಲ್ಪಟ್ಟಿದೆ. ಇದು ಬ್ರಹ್ಮವಿಚಾರ ಶಾಸ್ತ್ರ ಆದಕಾರಣ ಇದಕ್ಕೆ ಬ್ರಹ್ಮಮೀಮಾಂಸೆ ಎಂದೂ, ಬ್ರಹ್ಮವು ಜಗತ್ತನ್ನು ಶರೀರವಾಗಿ ಹೊಂದಿರುವುದನ್ನು ಪ್ರತಿಪಾದಿಸುವುದರಿಂದ ಶಾರೀರಕ ಮೀಮಾಂಸಾ ಶಾಸ್ತ್ರ ಎಂದೂ ಹೆಸರು ಬಂದಿದೆ.

ಸಕಲ ಪ್ರಪಂಚವನ್ನು ಸೃಷ್ಟಿಸುವವನು ಪರಬ್ರಹ್ಮ. ಆತನು ಈ ವಿಶ್ವವನ್ನೇ ಶರೀರವಾಗಿ ಹೊಂದಿದ್ದಾನೆ. ಸಕಲವಸ್ತುಗಳೂ ಅವನಲ್ಲಿವೆ. ಅವನು ಎಲ್ಲೆಯಿಲ್ಲದಿರುವ ಮಹಿಮೆ ಯುಳ್ಳವನು. ಜಗತ್ಕಾರಣನಾದ ಅವನು ಯಾರಿಂದಲೂ ಬಂಧಿಸಲ್ಪಡದವನು. ಆತನು ಆಶ್ರಿತ ರಾದವರಿಗೆ ಆಪ್ತನು. ಪಂಚಭೂತಗಳಿಗೆ, ಇಂದ್ರಿಯಗಳಿಗೆ ಹಾಗೂ ಜೀವಾತ್ಮನಿಗೆ ಕಾರಣ ನಾದವನು. ಈ ಸಂಸಾರವನ್ನು ನಡೆಸಲು ಬೇಕಾದ ಸಂಕಲ್ಪವುಳ್ಳವನು. ಚೇತನಾಚೇತನಗಳಲ್ಲೆಲ್ಲ ಅಂತರ್ಯಾಮಿಯಾಗಿದ್ದರೂ ಅವುಗಳ ದೋಷಗಳು ಅಂಟದಿರುವವನು, ಹಲವು ವಿಧವಾದ ಧ್ಯಾನ-ಉಪಾಸನೆಗಳಿಗೆ ವಿಷಯ ಲಕ್ಷ್ಯವಾಗಿರುವವನು, ವರ್ಣಾಶ್ರಮಧರ್ಮಗಳ ಅನುಷ್ಠಾನದಿಂದ ಸಂತೋಷಗೊಳ್ಳುವವನು, ಉಪಾಸಿಸುವ ಚೇತನರಲ್ಲಿರುವ ಸರ್ವಪಾಪಗಳನ್ನೂ ನಾಶ ಮಾಡುವ ದೃಢಸಂಕಲ್ಪವುಳ್ಳವನು, ಮೋಕ್ಷಮಾರ್ಗಕ್ಕೆ ಮುಖ್ಯವಾದ ಬ್ರಹ್ಮನಾಡಿಯಲ್ಲಿ ಜೀವನು ಪ್ರವೇಶಿಸುವಂತೆ ಮಾಡಬಲ್ಲವನು, ಜೀವವನ್ನು ವೈಕುಂಠ ಲೋಕಕ್ಕೆ ಕರೆದುಕೊಂಡು ಹೋಗಿ ಅಲ್ಲಿ ತನ್ನನ್ನು ಅನುಭವಿಸುವಂತೆ ಮಾಡಬಲ್ಲವನು, ಎಂದಿಗೂ ಬಿಡಲಾಗದಿರುವ ಶ್ರೀಪಾದವುಳ್ಳವನು-ಎಂಬುದು ಹದಿನಾರು ಭಾಗಗಳುಳ್ಳ ಶ್ರೀಭಾಷ್ಯದ ವಿಷಯವಾಗಿದೆ.

**ಅಖಿಲಭುವನ ಜನ್ಮ ಸ್ಥೇಮ ಭಂಗಾದಿ ಲೀಲೇ**
**ವಿನತ ವಿವಿಧ ಭೂತವ್ರಾತರಕ್ಷೈಕ ದೀಕ್ಷೇ ।**
**ಶ್ರುತಿ ಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ**
**ಭವತಮಮ ಪರಸ್ಮಿನ್ ಶೇಮುಷೀ ಭಕ್ತಿರೂಪಾ॥**

ಈ ಜಗತ್ತಿನ ಹುಟ್ಟು, ಇರುವಿಕೆ, ನಾಶಗಳಿಗೆ ಕಾರಣನಾದ ಭಗವಂತ ಈ ಜಗತ್ತಿನ ರಕ್ಷಕ, ವೇದಗಳಿಂದ ತಿಳಿಯಲ್ಪಡುವವನು, ಮಂದಿರಗಳಲ್ಲಿ ನಿಂತು ಅರ್ಚಾವತಾರದ ಮೂಲಕ ಭಕ್ತರನ್ನು ಅನುಗ್ರಹಿಸುತ್ತಾನೆ. ಪ್ರಕೃತ ತಿರುಪತಿಯಲ್ಲಿ ಶ್ರೀನಿವಾಸನಾಗಿ ಕಂಗೊಳಿಸುತ್ತಿದ್ದಾನೆ)

-ಎಂಬ ಶ್ರೀಭಾಷ್ಯದ ಆರಂಭದ ಮಂಗಳ ಶ್ಲೋಕದಲ್ಲಿಯೇ, ಸಗುಣ ಬ್ರಹ್ಮನ ಪ್ರಾಪ್ತಿಗೆ ಭಕ್ತಿಯೇ ಸಾಧನ ಎಂಬ ಗ್ರಂಥದ ಶಾಸ್ತ್ರಾರ್ಥವೆಲ್ಲಾ ಅಡಗಿದೆ. ವಾತ್ಸ್ಯವರದಾಚಾರ್ಯರು ಕಾಲಕ್ಷೇಪದಲ್ಲಿ ಹೇಳಿದ ಈ ಗ್ರಂಥದ ಪೂರ್ಣವಿವರಣೆಯನ್ನು, ಸುದರ್ಶನಾಚಾರ್ಯರು ರಚಿಸಿರುವ ಶ್ರುತ ಪ್ರಕಾಶಿಕೆ ಎಂಬ ವ್ಯಾಖ್ಯಾನರೂಪದ ವಿವರಣಗ್ರಂಥದಲ್ಲಿ ಕಾಣಬಹುದು.

೨. ಗದ್ಯತ್ರಯ : ಶ್ರೀವೈಕುಂಠ ಗದ್ಯ, ಶ್ರೀರಂಗ ಗದ್ಯ, ಶರಣಾಗತಿ ಗದ್ಯ ಎಂಬ ಮೂರು ಗ್ರಂಥಗಳಲ್ಲಿ ವಿಶಿಷ್ಟಾದ್ವೈತದ ತತ್ತ್ವ ಹಿತಪುರುಷಾರ್ಥಗಳನ್ನು ಸ್ಪಷ್ಟವಾಗಿ ನಿರೂಪಿಸಲಾಗಿದೆ. ಪ್ರಪತ್ತಿ ಅಥವಾ ಶರಣಾಗತಿ ಶಾಸ್ತ್ರಾರ್ಥವನ್ನು ಅನುಷ್ಠಿಸಿ, ಆ ಮೂಲಕ ಅದರ ಸ್ವರೂಪವನ್ನು ತಿಳಿಸಲಾಗಿದೆ. ಪದ್ಯಕ್ಕಿಂತಲೂ ಮಧುರವಾಗಿರುವ ಈ ಗದ್ಯಗಳು ಶಾಶ್ವತ ಸಾಹಿತ್ಯ ಎನಿಸಿವೆ.

೩. **ಗೀತಾಭಾಷ್ಯ** : ರಾಮಾನುಜ ದರ್ಶನವನ್ನು ಸರಿಯಾಗಿ ಗ್ರಹಿಸಲು ರಚಿಸಲ್ಪಟ್ಟಿರುವ ಗ್ರಂಥವಿದು. ಇದು ಅತ್ಯಂತ ಸಹಜ, ಸಮಂಜಸ, ಭೋಗ್ಯತಮ, ಹೃದಯಸ್ಪರ್ಶಿ, ನಿಷ್ಠಾಪೂರ್ಣ ಎನಿಸಿದ ಭಗವದ್ಗೀತೆಯ ವ್ಯಾಖ್ಯಾನವಾಗಿದೆ ಎಂಬುದು ಪ್ರಪಂಚದ ಮಹಾಮೇಧಾವಿಗಳ ಅಭಿಪ್ರಾಯ. ಪರಬ್ರಹ್ಮನಾದ ಶ್ರೀಕೃಷ್ಣಪರಮಾತ್ಮನಲ್ಲಿ ಭಕ್ತಿ ಪ್ರಪತ್ತಿಗಳನ್ನು ಅನುಷ್ಠಿಸುವುದರಿಂದ ಮೋಕ್ಷ ಸಿಗುತ್ತದೆ ಎಂಬ ಗೀತೆಯ ಸಾರಾಂಶವನ್ನು ಇಲ್ಲಿ ಹೃದಯಂಗಮ ವಾಗಿ ವಿವರಿಸಲಾಗಿದೆ. ಗೀತಾಚಾರ್ಯನಾದ ಶ್ರೀಕೃಷ್ಣನು ತನ್ನ ಶಿಷ್ಯನಾದ ಅರ್ಜುನನಿಗೆ ಯುದ್ಧಭೂಮಿಯಲ್ಲಿ ಉಪದೇಶಿಸಿದ ಸರ್ವೋತ್ಕೃಷ್ಟವಾದ ಭಕ್ತಿಶಾಸ್ತ್ರ ಎನಿಸಿದ ಭಗವದ್ಗೀತೆ ಯನ್ನು ಭಾರತೀಯ ತತ್ತ್ವಶಾಸ್ತ್ರಜ್ಞರ ಮೆದುಳು- ಹೃದಯಗಳೆರಡರಲ್ಲಿಯೂ ಮತ್ತೆ ಪ್ರತಿಷ್ಠಾಪಿಸಿ ತತ್ತ್ವ ಹಾಗೂ ಭಗವದನುಭೂತಿಗಳ ಸಮರಸತೆಯನ್ನು ಸ್ಥಾಪಿಸಿದ ಕೀರ್ತಿ ರಾಮಾನುಜರಿಗೆ ಸಲ್ಲುತ್ತದೆ. ಇದು ಭಗವಂತನು ಹಾಡಿದ ಕೃತಿ; ಇದರ ಪ್ರಕಾಶಕರು ವ್ಯಾಸರು.

೪. **ವೇದಾರ್ಥ ಸಂಗ್ರಹ** : ಉಪನಿಷತ್ತುಗಳ ವ್ಯಾಖ್ಯಾನವು ಸಾಕಷ್ಟು ಪ್ರಮಾಣದಲ್ಲಿ ಶ್ರೀಭಾಷ್ಯಗ್ರಂಥದಲ್ಲಿಯೇ ಬಂದಿರುವುದರಿಂದ ಅವುಗಳ ಮೇಲೆ ಭಾಷ್ಯ ರಚಿಸದೆ ಈ ಗ್ರಂಥವನ್ನು ಬರೆದಿದ್ದಾರೆ. ಇದರಲ್ಲಿ ಪೂರ್ವಪಕ್ಷವನ್ನು ಸಂಗ್ರಹಿಸಿ, ಶಂಕರ, ಭಾಸ್ಕರ ಮತ್ತು ಯಾದವ ಪ್ರಕಾಶರ ಮತಗಳನ್ನು ನಿರಸನಗೊಳಿಸಿ, ಸ್ವಸಿದ್ಧಾಂತವನ್ನು ಸ್ಥಾಪಿಸಲಾಗಿದೆ. ಮೇಲುನೋಟಕ್ಕೆ ಭಿನ್ನ ಭಿನ್ನವಾಗಿಯೇ ಕಾಣಬರುವ ವಿವಾದಾತ್ಮಕ ಶ್ರುತಿ ವಾಕ್ಯಗಳಿಗೆಲ್ಲ ಸಮಂಜಸ ಹಾಗೂ ನಿಷ್ಕೃಷ್ಟ ಆದ ಅರ್ಥವನ್ನು ಸಪ್ರಮಾಣವಾಗಿ ನೀಡಲಾಗಿದೆ. ವೇದಗಳೆಲ್ಲದರ ಸಾರಾರ್ಥವನ್ನು ಮಥಿಸಿ ನಿರ್ಣಯಿಸಿರುವ ಉತ್ತಮ ಸಿದ್ಧಾಂತದ ಪರವಾದ ಸ್ವತಂತ್ರ ಗ್ರಂಥ.

೫. **ವೇದಾಂತ ಸಾರ** : ಇದು ವಿಶೇಷವಾಗಿ ಶಾಸ್ತ್ರಜ್ಞಾನದ ಹಿನ್ನೆಲೆಯುಳ್ಳವರಿಗಾಗಿ ರಚಿಸಲ್ಪಟ್ಟ ಗ್ರಂಥ. ಬ್ರಹ್ಮಸೂತ್ರಗಳ ಸಾರಭೂತವಾದ ಅರ್ಥವನ್ನೂ, ತತ್ತ್ವಗಳ ಸಮಗ್ರ ಸಾರಾಂಶವನ್ನೂ, ಭಾಷ್ಯ ರೂಪದಲ್ಲಿ ಸಂಕ್ಷೇಪವಾಗಿ, ಸರಳರೂಪದಲ್ಲಿ ಕೊಡಲಾಗಿದೆ. ಶ್ರೀಭಾಷ್ಯವೆಂಬ ಸೌಧವನ್ನು ಹತ್ತುವ ಪ್ರಥಮ ಸೋಪಾನವಿದು.

೬. ವೇದಾಂತ ದೀಪ : ಈ ಗ್ರಂಥದಲ್ಲಿ ಶ್ರೀಭಾಷ್ಯ ಎಂಬ ಬ್ರಹ್ಮಸೂತ್ರಗಳ ವ್ಯಾಖ್ಯಾನ ವನ್ನೇ ಸಂಗ್ರಹವಾಗಿ, ಸರಳವಾಗಿ ನಿರೂಪಿಸಲಾಗಿದೆ.

೭. ನಿತ್ಯಗ್ರಂಥ : ಇದರಲ್ಲಿ ಭಗವದಾರಾಧನ ಕ್ರಮವನ್ನು ಆಗಮಗಳ ಆಧಾರದ ಮೇಲೆ ನಿರೂಪಿಸಲಾಗಿದೆ.

* * *

I feel bound to say that Ramanuja is on many Points the more faithful interpreter of vedantha suthras

*-Prof, Max Muller*

Ramanuja, with his Sariri-Sarira Bhava of God and world, a most Practical philosophy, a great appeal to the emotions, an entire denial of birthrights before spiritual attainments and its appeal through the popular tongue, Completly succeeded in bringing the masses back to the vedic Religion.

*- Swami Vivekananda*

Ramanuja is the greatest exponent of Hindu Theism and the greatest philosopher of Bhakthi His analogy of self body relationship between god and universe, is the best way. Ramanuja's doctrine is the heart of Vedantha and a clear expression of the real concerns of the Brahmasuthra.

*- Prof, Ninian Smart*

Ramanuja retains the realism of the Asthika philosophies and synthesises the Various currents of vedic ritualism, Bhagavatha devotion, philosophy of Alwars and Monism of Vedantha.

*- S.N. Dasgupta*

The view of Ramanuja Furnishes a close parallel to that of the Gita and Manu. The highest stage of the spirit is not Karma Sanyasa but one of the moral obligations, to be discharged disinterestedly, without any desire for the consequences. The theory of modified monism, found in some upanishads and the Bhagavadgita, is adopted by him.

*- Dr. Susheel Kumar Maitra*

Ramanuja expounds the poem gita in his Bhashya in a manner for closer to the intention of its author. It nearly approximates to the Visistadvaita philosophy.

*- W.D.P. Hill*

Ramanuja's Bhashya does full justice to the intensions of the gita, reconciles the barren absolute monistic thought with the living God of devotion and to show a new and supreme way of exlusive devotion to a merciful personal God endowed with all perfections, who can be fully known only

through love. He has restored the gita not only in the hearts but also in the minds of the indian thinkers, restoring unity of religion and philosophy and the reconciliation of thought and religion.

***- Prof. J.A.B. Van Buitenin***

## ೫. ರಾಮಾನುಜರ ವಿವಿಧ ಹೆಸರುಗಳು

ಇವರು ಹುಟ್ಟಿದಾಗ ತಂದೆ ಕೇಶವ ದೀಕ್ಷಿತರು ನಾಮಕರಣ ಮಾಡಿದ ಹೆಸರು ಇಳೆಯಾಳ್ವಾರ್.

ಶ್ರೀಪೆರಂಬೂದೂರಿನಲ್ಲಿ ಅವತರಿಸಿ ಇವರಿಗೆ ಅಲ್ಲಿನ ಕೇಶವ ದೇವರು ಕೊಟ್ಟ ಹೆಸರು ಭೂತಪುರೀಶನ್.

ಹುಟ್ಟಿದ ಮಗುವನ್ನು ಕಟಾಕ್ಷಿಸಿದ ಸೋದರಮಾವ ಶ್ರೀಶೈಲಪೂರ್ಣರು ಶ್ರೀರಾಮನ ತಮ್ಮ ಲಕ್ಷ್ಮಣನ ಅವತಾರ, ಅವನಂತೆ ಭಗವಂತನ ಕೈಂಕರ್ಯ ನಿಷ್ಠೆಯಲ್ಲಿ ಶ್ರೇಷ್ಠರೆನಿಸುತ್ತಾರೆ ಎಂದು ತಿಳಿದು ಅವರನ್ನು ರಾಮಾನುಜ ಎಂದು ಕರೆದರು.

ಬಲರಾಮನ ತಮ್ಮ ಶ್ರೀಕೃಷ್ಣನು ವಸುದೇವ ಪತ್ನಿ ದೇವಕಿಯ ಎಂಟನೆಯ ಗರ್ಭದಲ್ಲಿ ಅವತರಿಸಿ, ಕಂಸನೇ ಮೊದಲಾದ ದುಷ್ಟ ಜನರನ್ನು ನಿಗ್ರಹಿಸಿದನು. ಅದೇ ರೀತಿಯಲ್ಲಿ ವಿಷ್ವಕ್ಸೇನ, ಶಠಗೋಪ, ನಾಥಮುನಿ, ಪುಂಡರೀಕಾಕ್ಷ, ರಾಮಮಿಶ್ರ, ಯಾಮುನ, ಪೆರಿಯನಂಬಿ ಎಂಬ ಏಳು ಶ್ರೇಷ್ಠ ಆಚಾರ್ಯರುಗಳ ನಂತರ ಎಂಟನೆಯವರಾಗಿ ಅವತರಿಸಿದ ರಾಮಾನುಜರು ವಿಶಿಷ್ಟಾದ್ವೈತ ವೇದಾಂತದ ವಿರೋಧಿಗಳನ್ನೆಲ್ಲ ನಿಗ್ರಹಿಸಿ ಜಯ ಗಳಿಸಿದರು.

ಶ್ರೀಕೃಷ್ಣನು ಮಥುರೆಯಲ್ಲಿ ಜನಿಸಿ, ಗೋಕುಲದಲ್ಲಿ ಬೆಳೆದು, ದ್ವಾರಕೆಯಲ್ಲಿ ನೆಲೆಸಿದಂತೆ, ರಾಮಾನುಜರು ಶ್ರೀಪೆರಂಬೂದೂರಿನಲ್ಲಿ ಹುಟ್ಟಿ, ಕಂಚಿಯಲ್ಲಿ ಬೆಳೆದು, ಶ್ರೀರಂಗದಲ್ಲಿ ನೆಲೆಸಿದರು.

ಶ್ರೀಕೃಷ್ಣನು ಯಮುಳಾರ್ಜುನರ ಮಧ್ಯೆ ಹೋಗಿ ಅವರಿಗೆ ಶಾಪವಿಮೋಚನೆ ಮಾಡಿದಂತೆ, ರಾಮಾನುಜರು ಸುಖದುಃಖ, ಅಹಂಕಾರ-ಮಮಕಾರ, ಕಾಮ - ಕ್ರೋಧ, ಪಾಪ-ಪುಣ್ಯ, ಎಂಬೀ ದ್ವಂದ್ವಗಳ ಮಧ್ಯೆ ಸಿಕ್ಕಿ ಹಾಕಿಕೊಂಡಿದ್ದ ಜನರನ್ನು ಉದ್ಧರಿಸಿದರು.

ಶ್ರೀಕೃಷ್ಣನು ಸಪ್ತಲೋಕಗಳಲ್ಲಿಯೂ ಪ್ರಕಾಶಿಸಿದಂತೆ, ರಾಮಾನುಜರು ಶ್ರುತಿ, ಸ್ಮೃತಿ, ಪುರಾಣ, ಇತಿಹಾಸ, ಆಗಮ, ಪ್ರಬಂಧ, ಆಚಾರ್ಯ ಸೂಕ್ತಿ ಎಂಬ ಏಳು ಪ್ರಮಾಣಗಳ ಆಧಾರದ ಮೇಲೆ ನೂತನ ಸಿದ್ಧಾಂತವನ್ನು ಸ್ಥಾಪಿಸಿ ಪ್ರಕಾಶಮಾನರಾಗಿದ್ದಾರೆ.

ಶ್ರೀಕೃಷ್ಣನು ಪಂಚಪಾಂಡವರನ್ನು ರಕ್ಷಿಸಿದಂತೆ ರಾಮಾನುಜರು ಅರ್ಥಪಂಚಕವನ್ನು ರಕ್ಷಿಸಿ, ಬೆಳೆಸಿ, ಜನರಿಗೆ ಜ್ಞಾನ ದೊರೆಯಲು ಕಾರಣರಾಗಿದ್ದಾರೆ.

ಮೊದಲು ಗುರುಗಳಾಗಿದ್ದು, ಆಮೇಲೆ ಶಿಷ್ಯರಾದ ಅದ್ವೈತಿ ಯಾದವಪ್ರಕಾಶರ ಗೋಷ್ಠಿ

ಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ ರಾಮಾನುಜರನ್ನು ಯಾಮುನಾಚಾರ್ಯರು ದೂರದಿಂದಲೇ ಕಟಾಕ್ಷಿಸಿ, ಅವರು ವಿಶಿಷ್ಟಾದ್ವೈತ ಸಿದ್ಧಾಂತದ ಮುಂದಿನ ಪ್ರಮುಖ ಪ್ರವರ್ತಕರು ಆಗುವಂತೆ ಅನುಗ್ರಹಿಸಿ, ಅವರನ್ನು ಇಳೆಯ ಪೆರುಮಾಳ್ ಎಂದು ಕರೆದರು. ಜೊತೆಗೆ ತಮ್ಮ ಐವರು ಮುಖ್ಯ ಶಿಷ್ಯರು ತಮ್ಮ ಜ್ಞಾನಾನುಭವಗಳನ್ನೆಲ್ಲ ರಾಮಾನುಜರಿಗೆ ಕಲಿಸಬೇಕೆಂದೂ ಆದೇಶವಿತ್ತರು. ಕಂಚಿಯ ವರದರಾಜಸ್ವಾಮಿಯ ಆದೇಶದಂತೆ ಯಾದವಪ್ರಕಾಶರು ರಾಮಾನುಜರನ್ನು ಪ್ರದಕ್ಷಿಣೆ ಮಾಡಿ ಪ್ರಪಂಚ ಪರ್ಯಟನೆ ಮಾಡಿದಂತೆ ಎಂದು ಭಾವಿಸಿದರು.

೧. ಮಹಾಪೂರ್ಣರು (ಪೆರಿಯನಂಬಿ) ರಾಮಾನುಜರ ಮುಖ್ಯ ಆಚಾರ್ಯರಾಗಿ ಅವರಿಗೆ ಪಂಚಸಂಸ್ಕಾರಗಳನ್ನು ಮಾಡಿ ಅವರನ್ನು ರಾಮಾನುಜನ್ ಎಂದು ಕರೆದರು. ತನ್ನ ಶಿರಸ್ಸು ರಾಮಾನುಜರ ಪಾದಗಳಿಗೆ ನಮ ಎಂದು ಶಿಷ್ಯ ರಾಮಾನುಜರಿಗೆ ಗುರುಗಳು ವಂದಿಸುತ್ತಿದ್ದರು.

೨. ಶ್ರೀರಂಗದಿಂದ ಮಧುರೆಗೆ ಬೇಸರಪಡದೆ ಹದಿನೆಂಟು ಬಾರಿ ಹೋಗಿ ಗೋಷ್ಠಿಪೂರ್ಣರನ್ನು (ತಿರುಕ್ಕೋಟಿಯೂರ್ ನಂಬಿ) ಒಲಿಸಿಕೊಂಡು, ಅವರಿಂದ ಬಹಳ ಶ್ರಮಪಟ್ಟು ಕಲಿತ ಅತಿಗೋಪ್ಯವಾದಗಳ ಚರಮಶ್ಲೋಕ ಆದಿ ಮಂತ್ರಗಳ ರಹಸ್ಯಾರ್ಥವನ್ನು ಸಕಲ ಚೇತನರ ಉದ್ಧಾರವಾಗಲಿ ಎಂಬ ಸದುದ್ದೇಶದಿಂದ ಎಲ್ಲರಿಗೂ ಉಪದೇಶ ಮಾಡಿದ ರಾಮಾನುಜರ ಬಗ್ಗೆ ಕೋಪಗೊಂಡಿದ್ದ ಗುರುಗಳು, ಭಗವಂತನ ಕಾರುಣ್ಯಕ್ಕಿಂತಲೂ, ರಾಮಾನುಜರ ಕಾರುಣ್ಯ ಮಹತ್ತರವಾದುದು ಎಂಬುದಾಗಿ ಹೇಳಿದುದಲ್ಲದೆ, ರಾಮಾನುಜರಲ್ಲಿ ಇರುವಷ್ಟು ವಿಶಾಲ ಭಾವನೆ, ಔದಾರ್ಯ ತಮ್ಮಲ್ಲಿ ಬರಲಿಲ್ಲವಲ್ಲಾ ಎಂದು ಶೋಕಿಸಿ, ರಾಮಾನುಜರನ್ನು ಎಂಬೆರುಮಾನಾರ್ ಎಂದು ಕರೆದು ವಿಶಿಷ್ಟಾದ್ವೈತ ಸಿದ್ಧಾಂತವು ಎಂಬೆರುಮಾನಾರ್ ದರ್ಶನ ಎಂದೇ ಕರೆಯಲ್ಪಡಲಿ ಎಂದು ಹರಸಿದರು.

೩. ರಾಮಾನುಜರಿಗೆ ಆಳ್ವಾರುಗಳ ದಿವ್ಯ ಪ್ರಬಂಧಗಳ, ಮುಖ್ಯವಾಗಿ ತಿರುವಾಯ್ಮೊಳಿಯ ಅರ್ಥವನ್ನು ಕಲಿಸಿದ ಮಾಲಾಧರರು, (ತಿರುಮಲೈಯಾಂಡಾನ್) ತನಗಿಂತ ರಾಮಾನುಜರಿಗೇ ಪೂರ್ವಾಚಾರ್ಯರ ಅಭಿಪ್ರಾಯವು ಚೆನ್ನಾಗಿ ತಿಳಿದಿದೆಯೆಂದು ಹೇಳಿ ಅವತಾರ ಪುರುಷನೆಂದು ತಿಳಿದು ಅವರನ್ನು ಶಠಗೋಪನ್ ಪೊನ್ನಡಿ ಎಂದು ಕರೆದರು.

೪. ಸೋದರ ಮಾವನಾದ ಶ್ರೀಶೈಲಪೂರ್ಣರಲ್ಲಿ (ಪೆರಿಯ ತಿರುಮಲೆನಂಬಿ) ಕಾಲಕ್ಷೇಪ ಮಾಡಿ, ಪ್ರಪತ್ತಿವೇದ, ಶರಣಾಗತಿಶಾಸ್ತ್ರ ಎನಿಸಿದ ರಾಮಾಯಣದ ಗೂಢಾರ್ಥವನ್ನೆಲ್ಲಾ ಅರಿತು, ತಿರುಮಲೆಯ ಶ್ರೀನಿವಾಸ ದೇವರಿಗೆ ಮನಃಪೂರ್ವಕವಾಗಿ ಸೇವೆ ಸಲ್ಲಿಸಿದ ರಾಮಾನುಜರನ್ನು ಗುರುಗಳು ಕೋಯಿಲಣ್ಣನ್ ಎಂದು ಕರೆದರು. ರಾಮಾನುಜರಿಗಿಂತ ತಾನೇ ಚಿಕ್ಕವನು ಎಂದು ಶ್ರೀಶೈಲಪೂರ್ಣರು ಭಾವಿಸಿದ್ದರು.

೫. ಶ್ರೀರಂಗದ ರಂಗನಾಥ ದೇವರನ್ನು ರಾಗದೊಂದಿಗೆ ಸ್ತೋತ್ರ ಮಾಡುವ ಅರೈಯರ್‌ಗಳಲ್ಲಿ ಮುಖ್ಯರಾದ ತಿರುವರಂಗಪ್ಪೆರುಮಾಳ್ ಅರೈಯರ್ ಅಥವಾ ವರರಂಗ ಗಾಯಕರಿಗೆ (ಆಳವಂದಾರಾಳ್ವಾನ್) ಚೆನ್ನಾಗಿ ಸೇವೆ ಮಾಡಿ, ಅವರಿಂದ ಆಳ್ವಾರುಗಳ ದಿವ್ಯ ಪ್ರಬಂಧದ

ಮೂಲಾರ್ಥವನ್ನು, ಪಂಚಮೋಪಾಯ ಹಾಗೂ ಆಚಾರ್ಯಾಭಿಮಾನದ ಲಕ್ಷಣಗಳನ್ನು ಗ್ರಹಿಸಿ, ಕೈಂಕರ್ಯ ಸಾಮ್ರಾಜ್ಯದ ಒಡೆಯರೆನಿಸಿದ ರಾಮಾನುಜರನ್ನು ಗುರುಗಳು ಲಕ್ಷ್ಮಣಮುನಿ ಎಂದು ಕರೆದರು.

ಗುರುಗಳಿಗೆ ಗೌರವ ಸಲ್ಲಿಸಲಾಗದ, ಆಧ್ಯಾತ್ಮಿಕ ಸಾಧನೆಗೆ ಹಾಗೂ ನೂತನ ಸಿದ್ಧಾಂತದ ಪ್ರಚಾರಕ್ಕೆ ಅಡ್ಡಿಯಾಗಿದ್ದ ಗೃಹಸ್ಥ ಜೀವನವನ್ನು ತೊರೆದು, ಲೋಕೋದ್ಧಾರಕ್ಕೆ ಅವಶ್ಯವಾದ ಸಂನ್ಯಾಸವನ್ನು ಕಂಚಿಯ ವರದರಾಜಸ್ವಾಮಿಯ ಸನ್ನಿಧಿಯಲ್ಲಿ ಸ್ವೀಕರಿಸಿ, ದೇವರಿಂದಲೇ ಯತಿರಾಜ, ದೇಶಿಕೇಂದ್ರ ಎಂದು ಕರೆಸಿಕೊಂಡರು.

ನಿತ್ಯ, ಲೀಲಾ ಎಂಬ ಉಭಯ ವಿಭೂತಿಯ ಒಡೆಯನಾದ ಶ್ರೀರಂಗದ ರಂಗನಾಥ ಸ್ವಾಮಿಯಿಂದ ಉಡೈಯವರ್ ಎಂದು ಕರೆಸಿಕೊಂಡರು.

ತಿರುಮಲೆಯ ಶ್ರೀನಿವಾಸಸ್ವಾಮಿಗೆ ಶಂಖಚಕ್ರಗಳನ್ನು ಧಾರಣೆಮಾಡಿ ಅವನಿಂದ ದೇಶಿಕೇಂದ್ರನ್ ಎಂದು ಕರೆಸಿಕೊಂಡರು.

ಮೇಲುಕೋಟೆಯ ಸಂಪತ್ಕುಮಾರನೆಂಬ ಹೆಸರಿನ ಚೆಲುವನಾರಾಯಣಸ್ವಾಮಿಯನ್ನು ಪುತ್ರನನ್ನಾಗಿ ಭಾವಿಸಿ ಸ್ವಾಮಿ ತಂದೆ ಎಂದು ಕರೆಸಿಕೊಂಡರು.

ತಿರುಕ್ಕುರುಂಗಡಿ ಕ್ಷೇತ್ರದ ಭಗವಂತನು ರಾಮಾನುಜರನ್ನು ಸ್ವಾಮಿ ಎಂಬ ಹೆಸರಿನಿಂದ ಕರೆದನು.

ಶಿಷ್ಯ ಕೂರೇಶರ ನೆರವಿನಿಂದ ಶ್ರೀಭಾಷ್ಯವನ್ನು ರಚಿಸಿ, ಪರಾಶರಭಟ್ಟರಿಂದ ವಿಷ್ಣು ಸಹಸ್ರನಾಮಕ್ಕೆ ವ್ಯಾಖ್ಯಾನವನ್ನು ಬರೆಸಿ, ಪಿಳ್ಳಾನ್‌ರವರಿಂದ ತಿರುವಾಯ್ಮೊಳಿಗೆ ಭಾಷ್ಯವನ್ನು ಬರೆಸಿ, ಆ ಮೂಲಕ ಯಾಮುನರ ಮೂರು ಅಂತಿಮೇಚ್ಛೆಯನ್ನು ಪೂರೈಸಿ ಯಾಮುನಾಂಗುಳಿ ಮೋಚಕ ಎಂದು ರಾಮಾನುಜರು ಕರೆಸಿಕೊಂಡರು.

ರಾಮಾನುಜರು ರಚಿಸಿದ ಶ್ರೀಭಾಷ್ಯವನ್ನು ಆಲಿಸಿದ ಕಾಶ್ಮೀರದ ಶ್ರೀನಗರದ ಭಟ್ಟಿ ಮಂಟಪದಲ್ಲಿ ರಾಮಾನುಜರು ಶ್ರೀಭಾಷ್ಯಕಾರ ಎಂದು ಕರೆಸಿಕೊಂಡರು. ಅಲ್ಲಿ ಶ್ರೀಲಕ್ಷ್ಮೀ ಹಯವದನನ ದಿವ್ಯ ಮಂಗಳ ವಿಗ್ರಹವು ಉಡುಗೊರೆಯಾಗಿ ಸಿಕ್ಕಿತು.

ಭಿಕ್ಷೆಗೆ ಹೋಗುತ್ತಿದ್ದ ಕಾಲದಲ್ಲಿ ಸಕಲ ವೇದಶಾಸ್ತ್ರಾರ್ಥಸಾರ ಎನಿಸಿರುವ ಆಂಡಾಳ್‌ರವರ ತಿರುಪ್ಪಾವೈ ಗೀತೆಯನ್ನು ಹಾಡುತ್ತಿದ್ದುದರಿಂದ ತಿರುಪ್ಪಾವೈಜೀಯರ್ ಎಂದು ಕರೆಸಿಕೊಂಡರು.

ಆಂಡಾಳ್ ಆಸೆಪಟ್ಟು, ನೆರವೇರಿಸಲು ಸಾಧ್ಯವಾಗದಿದ್ದ ಹರಕೆ ಕೈಂಕರ್ಯವನ್ನು ಪೂರ್ಣಗೊಳಿಸಿ ಅಂದರೆ ತಿರುಮಾಲಿರುಂ ಶೋಲೈನಲ್ಲಿರುವ ಸುಂದರಬಾಹು ಸ್ವಾಮಿಗೆ, ನೂರು ಕೊಡ ಕ್ಷೀರಾನ್ನ ಮತ್ತು ನೂರುಕೊಡ ಬೆಣ್ಣೆಗಳನ್ನು, ಕಿಡಾಂಬಿ ಆಚ್ಚಾನ್‌ರವರ ಸಹಾಯದಿಂದ ಅರ್ಪಿಸಿ, ಗೋದಾಗ್ರಜ, ಗೋದಾಭೀಷ್ಟ ಪ್ರಪೂರಕ ಎಂದು ಕರೆಸಿಕೊಂಡರು.

ಸಾರಾಸಾರ ಮಿಶ್ರವಾದ ಶಾಸ್ತ್ರಗಳಲ್ಲಿ ಅಸಾರವಾದುದನ್ನು ತ್ಯಜಿಸಿ, ಸಾರವಾದುದನ್ನೇ ಆರಿಸಿಕೊಂಡು, ಬ್ರಹ್ಮಜ್ಞಾನಕ್ಕೆ ಪ್ರೇರಕರಾಗಿ, ಅದನ್ನು ಪ್ರಕಾಶಗೊಳಿಸಿ, ವಿಷ್ಣುಪತ್ನಿಯಾದ ಶ್ರೀದೇವಿಯ ಹೆಜ್ಜೆಗಳನ್ನು ಅನುಸರಿಸಿ ರಾಜಹಂಸ ಎಂದು ಕರೆಸಿಕೊಂಡರು.

ಭಗವಂತನನ್ನು ಮಾತ್ರ ಅಪೇಕ್ಷಿಸಿ, ಮಧುರ ಭಾವನೆಗಳೇ ತುಂಬಿರುವ ದಿವ್ಯ ಪ್ರಬಂಧಗಳ ಕಾಲಕ್ಷೇಪಮಾಡಿ, ನೂರಾರು ದಿವ್ಯದೇಶಗಳನ್ನು ಸಂದರ್ಶಿಸಿ, ಗ್ರಂಥಗಳನ್ನು ರಚಿಸಿ, ತಡೆ-ಆತಂಕಗಳಿಲ್ಲದ ಗೌರವಾದರಗಳನ್ನು ಪಡೆದು ಭೃಂಗರಾಜ ಎಂದು ಕರೆಸಿಕೊಂಡರು.

ತಮ್ಮ ನೂತನ ಶರೀರ-ಶರೀರಿ ಸಂಬಂಧ ಸಿದ್ಧಾಂತದ ಮೂಲಕ ಭೇದ-ಅಭೇದ ಶ್ರುತಿವಾಕ್ಯಗಳಲ್ಲಿ ಸಮನ್ವಯ, ಪಾಂಚರಾತ್ರ ಆಗಮದ ಪ್ರಮಾಣ ಸ್ಥಾಪನೆ, ದೇವಾಲಯಗಳ ನಿರ್ಮಾಣ, ಆಗಮೋಕ್ತ ಪೂಜಾ ವ್ಯವಸ್ಥೆ, ಪ್ರಪತ್ತಿಯ ಮೂಲಕ ಎಲ್ಲರಿಗೂ ಮೋಕ್ಷ-ಇವು ರಾಮಾನುಜರು ಸಾಧಿಸಿದ ಐದು ಮಹತ್ಕಾರ್ಯಗಳು.

ಶ್ರೀರಂಗದ ದೇವಾಲಯದ ಅಧಿಕಾರಿಯಾಗಿದ್ದ ತಿರುವರಂಗತ್ತ ಅಮುದನಾರ್ ರಾಮಾನುಜರನ್ನು ಕುರಿತು ಹಾಡಿದ ರಾಮಾನುಜ ನೂತ್ತಂದಾದಿಯು ದಿವ್ಯಪ್ರಬಂಧದ ಭಾಗವಾಗಿ ಪ್ರಪನ್ನಗಾಯತ್ರಿ ಎಂಬ ಹೆಸರಿನಿಂದ ಪಾರಾಯಣ ಮಾಡಲ್ಪಡುತ್ತಿದೆ. ರಾಮಾನುಜರನ್ನು ಆರಾಧಿಸುವುದು ಶ್ರೀಹರಿಯ ಪೂಜೆಗೆ ಸಮ ಎಂದು ಹೇಳಿದ್ದಾರೆ. ರಾಮಾನುಜರ ಪಾದಗಳನ್ನು ಪಂಚಮೋಪಾಯ ಎಂದ ಶಿಷ್ಯರಾದ ಆಂಧ್ರಪೂರ್ಣರು (ವಡುಗನಂಬಿ) ಯತಿರಾಜವೈಭವ ಮತ್ತು ರಾಮಾನುಜ ಅಷ್ಟೋತ್ತರ ಎಂಬ ಸ್ತೋತ್ರಗಳನ್ನು ರಚಿಸಿ ಗುರುಕಾಣಿಕೆ ಸಲ್ಲಿಸಿದ್ದಾರೆ.

ಶ್ರೀರಂಗದಲ್ಲಿ ಪಿಳ್ಳಾನ್, ಶ್ರೀಪೆರಂಬೂದೂರಿನಲ್ಲಿ ಮುದಲಿಯಾಂಡಾನ್, ಕಂಚಿಯಲ್ಲಿ ನಡಾದೂರಾಳ್ವಾನ್, ತಿರುಪತಿಯಲ್ಲಿ ತಿರುಮಲೆನಂಬಿ, ಈ ನಾಲ್ವರೂ ರಾಮಾನುಜರ ವಿಗ್ರಹವಿರುವ ಸನ್ನಿಧಿಗಳನ್ನು ಕಟ್ಟಿಸಿ ಅವರ ಪ್ರಭಾವವನ್ನು ಹರಡಿದ್ದಾರೆ.

ನಾರಾಯಣ, ರಾಮಾನುಜ ಎಂಬ ಎರಡೂ ಶಬ್ದಗಳು ನಾಲ್ಕು ಅಕ್ಷರಗಳಿಂದ ಕೂಡಿವೆ. ನಾರಾಯಣ ಎಂಬುದು ದುಷ್ಟನಿಗ್ರಹ, ಶಿಷ್ಟಪರಿಪಾಲನೆ ಎಂಬೆರಡೂ ಕಾರ್ಯಗಳನ್ನು ಮಾಡುತ್ತ, ಬಂಧಮೋಕ್ಷಗಳಿಗೆ ಕಾರಣವಾಗಿದೆ. ಆದರೆ ರಾಮಾನುಜ ಎಂಬುದು ಶಿಕ್ಷಿಸದೆ ತನ್ನ ಕಾರುಣ್ಯದ ಮಹಿಮೆಯಿಂದ ಕೇವಲ ಮೋಕ್ಷವನ್ನು ಅನುಗ್ರಹಿಸುತ್ತದೆ. ಆದುದರಿಂದ ನಾರಾಯಣ ಎಂಬ ಪದಕ್ಕಿಂತ ರಾಮಾನುಜ ಎಂಬ ಪದವೇ ಶ್ರೇಷ್ಠವಾದುದು ಎಂದು ಕೂರೇಶರು ಹೇಳಿದ್ದಾರೆ.

ರಾಮಾನುಜ ಎಂಬ ನಾಲ್ಕು ಅಕ್ಷರಗಳೇ ತಿರುಮಂತ್ರ, ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿಗಳಿಗಿಂತ ರಾಮಾನುಜರ ಪಾದಗಳ ಕೈಂಕರ್ಯವೇ ಪರಮಪುರುಷಾರ್ಥ ಎಂದು ನಡಾದೂರಮ್ಮಾಳ್ ಹೇಳಿದ್ದಾರೆ.

ರಾಮಾನುಜರು ಸಕಲಲೋಕಗಳಿಗೂ ಗುರು. ಅವರು ಮಾತ್ರ ಎಲ್ಲರಿಗೂ ಮುಕ್ತಿಯನ್ನು ಕರುಣಿಸಬಲ್ಲರು ಎಂದು ಕಣಿಯನೂರು ಶಿರಿಯಾಚ್ಚಾನ್ ಹೇಳಿದ್ದಾರೆ.

ರಾಮಾನುಜ ಎಂಬ ಸೂರ್ಯನು, ಪುಣ್ಯಗಳೆಂಬ ಕಮಲದ ಹೂಗಳನ್ನು ವಿಕಾಸಗೊಳಿಸಿ, ಪಾಪಗಳೆಂಬ ಅಂಧಕಾರ, ಅಜ್ಞಾನಗಳನ್ನು ಧ್ವಂಸಗೊಳಿಸಿ, ಲೋಕೋಜ್ಜೀವನಕ್ಕಾಗಿ ಅವತರಿಸಿದವರು ಎಂದು ಕಂದಾಡೈ ಆಂಡಾನ್ ಹೇಳಿದ್ದಾರೆ.

ರಾಮಾನುಜರು ಹುಟ್ಟಿದುದರಿಂದಲೇ ಪ್ರಪತ್ತಿಗೆ (ಶರಣಾಗತಿ) ಒಂದು ಪ್ರಮುಖ ಸ್ಥಾನ ದೊರಕಿತು ಎಂದು ಪಿಳ್ಳೈಪೆರುಮಾಳ್ ಅಯ್ಯಂಗಾರ್ ತಮ್ಮ ಯತಿರಾಜರ್ ಅಂತಾದಿಯಲ್ಲಿ ಹೇಳಿದ್ದಾರೆ.

ಕವಿತಾರ್ಕಿಕ ಕೇಸರಿ, ಸರ್ವತಂತ್ರ ಸ್ವತಂತ್ರ, ಎಂಬ ಬಿರುದು ಹೊಂದಿದ್ದ ನಿಗಮಾಂತ ಮಹಾದೇಶಿಕರು, ಯತಿರಾಜ ಸಪ್ತತಿ ಎಂಬ ಸ್ತೋತ್ರವನ್ನು ರಚಿಸಿ ರಾಮಾನುಜರನ್ನು ಕೊಂಡಾಡಿದ್ದಾರೆ.

ಮಣವಾಳ ಮಾಮುನಿಗಳು, ಯತಿರಾಜ ವಿಂಶತಿ, ಉಪದೇಶ ರತ್ನಮಾಲೆ, ಆರ್ತಿಪ್ರಬಂಧ ಎಂಬ ಸ್ತೋತ್ರಗಳನ್ನು ರಚಿಸಿ, ರಾಮಾನುಜರನ್ನು ಕೊಂಡಾಡಿದ್ದಾರೆ.

ತಾಯಿ ಸೀತೆ, ಮಗ ಪ್ರಹ್ಲಾದ, ತಮ್ಮ ವಿಭೀಷಣ, ಗುರು ಶಠಗೋಪ, ಶಿಷ್ಯ ರಾಮಾನುಜ- ಈ ಐವರಲ್ಲಿ ಮಾತ್ರ ದೀನದಲಿತರ ಬಗ್ಗೆ ಸಹಾನುಭೂತಿ, ಕರುಣೆಗಳನ್ನು ಕಾಣಬಹುದು ಎಂದು ಅಳಗಿಯ ಮಣವಾಳ ನಾಯನಾರ್ ತಮ್ಮ ಆಚಾರ್ಯಹೃದಯದಲ್ಲಿ ಹೇಳಿದ್ದಾರೆ.

ಬಲರಾಮನ ತಮ್ಮ ಶ್ರೀಕೃಷ್ಣನು ಯಮುನಾನದಿಯಲ್ಲಿ ಜಲಕ್ರೀಡೆ ಆಡಿ, ಕಾಳಿಂಗನ ಹೆಡೆಯ ಮೇಲೆ ನರ್ತನಮಾಡಿ, ದಡದಲ್ಲಿ ಲೋಕಮೋಹಕ ಲೀಲೆಗಳನ್ನು ಎಸಗಿ, ನರಕಾಸುರನನ್ನು ಸಂಹರಿಸಿ, ದಿವ್ಯವಾಣಿಯಾದ ಗೀತೋಪದೇಶ ಮಾಡಿದ್ದಾನೆ; ಹಾಗೆಯೇ ರಾಮಾನುಜರು, ಯಾಮುನರ ಗ್ರಂಥಗಳನ್ನು ಓದಿ ಅವರ ಶಿಷ್ಯರ ಮೂಲಕ ಅವರ ಅಭಿಪ್ರಾಯಗಳೆಲ್ಲವನ್ನೂ ತಿಳಿದುಕೊಂಡು, ಗ್ರಂಥರಚನೆ ಮಾಡಿ, ನರಕಮಾರ್ಗವನ್ನು ತಪ್ಪಿಸಲು ಭಕ್ತಿ ಪ್ರಪತ್ತಿಗಳಿಂದ ಪರಮಪದದ ಮಹಾದ್ವಾರವನ್ನು ತೆರೆದಿಟ್ಟು, ಶ್ರೀವೈಷ್ಣವ ಮತ-ಸಮಾಜಗಳ ಸಂಘಟನೆಗಾಗಿ ಅನೇಕ ಲೀಲೆಗಳನ್ನು ಮಾಡಿ ತೋರಿಸಿದರು ಎಂಬುದಾಗಿ ವೆಂಕಟಾಧ್ವರಿಯು ತಾವು ರಚಿಸಿದ ವಿಶ್ವಗುಣಾದರ್ಶ ಚಂಪೂ ಎಂಬ ಕಾವ್ಯದಲ್ಲಿ ಹೇಳಿದ್ದಾರೆ.

ಶ್ರೀರಾಮನಿಂದ ಅಯೋಧ್ಯೆ, ಶ್ರೀಕೃಷ್ಣನಿಂದ ಮಥುರೆ ಪ್ರಸಿದ್ಧಿ ಹೊಂದಿರುವಂತೆ, ಯತಿರಾಜ ರಾಮಾನುಜರ ಅವತಾರದಿಂದ ಭೂತಪುರಿ ಅಥವಾ ಶ್ರೀಪೆರಂಬೂದೂರು ಒಂದು ಪುಣ್ಯಕ್ಷೇತ್ರ ಎನಿಸಿದ್ದು ರಾಮಾನುಜರು ಶ್ರೀಪೆರಂಬೂದೂರ್ ಮಾಮುನಿ ಎನಿಸಿಕೊಂಡರು.

ಹೀಗೆ ಶ್ರೀವೈಷ್ಣವ ಆಚಾರ್ಯರಲ್ಲಿ ಭಗವಾನ್ ಎನಿಸಿದ ರಾಮಾನುಜರು ಶ್ರೀರಾಮ-ಶ್ರೀಕೃಷ್ಣರಂತೆ ಶಸ್ತ್ರಾಸ್ತ್ರಗಳನ್ನು ತೊಟ್ಟು ಭಯಪಡಿಸದೆ, ತಮ್ಮ ನಿಶ್ಚಿತಜ್ಞಾನ ಬಲದಿಂದ ಹಾಗೂ ಪ್ರೇಮ-ಕರುಣೆಗಳ ಮೂಲಕ, ಜನರನ್ನು ಸನ್ಮಾರ್ಗಕ್ಕೆ ತಂದು ಉದ್ಧರಿಸಿ, ಅಮೋಘ ಸ್ಥಾನವನ್ನು ಗಳಿಸಿಕೊಂಡಿದ್ದಾರೆ.

## ೭. ರಾಮಾನುಜರ ದಿವ್ಯಾಜ್ಞೆ

ಶ್ರೀಭಾಷ್ಯದ್ರವಿಡಾಗಮೋ ಪ್ರವಚನೇ ಶ್ರೀಶಸ್ಥಲೇಷ್ವನ್ಯಹಂ
ಕೈಂಕರ್ಯಂ ಯದುಶೈಲ ನಿತ್ಯವಸತಿಸ್ಸಾರ್ಥದ್ವಯೋಚ್ಚಾರಣಂ ।
ಯದ್ವಾಭಾಗವತಾಭಿಮಾನವಸತಿ ಶ್ರೇಯಸ್ಸತಾಮಿತ್ಯಲಂ
ಶಿಷ್ಯನ್ ಪ್ರಾಹಯತೀಶ್ವರಃ ಪರಮಗಾದ್ವಿಷ್ಣೋಃ ಪದಂ ಶಾಶ್ವತಂ ॥

ಭಗವಂತನಿಗೆ ಪ್ರಿಯವಾದ ಶ್ರೀಭಾಷ್ಯ ಎಂಬ ಬ್ರಹ್ಮಸೂತ್ರಗಳ ವ್ಯಾಖ್ಯಾನವನ್ನು ಓದಿ ತಿಳಿದುಕೊಂಡು ಇತರರಿಗೆ ತಿಳಿಸಬೇಕು. ಆಳ್ವಾರುಗಳು ಹಾಡಿರುವ ದಿವ್ಯ ಪ್ರಬಂಧ ಎಂಬ ಭಗವದ್ವಿಷಯವನ್ನು ಮತ್ತು ಅವುಗಳಿಗೆ ಆಚಾರ್ಯರುಗಳು ಹೇಳಿರುವ ವ್ಯಾಖ್ಯಾನವನ್ನು ಮನನ ಮಾಡಬೇಕು. ಅದು ಸಾಧ್ಯವಿಲ್ಲದಿದ್ದರೆ ದಿವ್ಯದೇಶಗಳೆಂಬ ವಿಷ್ಣು ಕ್ಷೇತ್ರಗಳಲ್ಲಿ ವಾಸಿಸಿ ದೇವರಿಗೆ ದೀಪ, ಪುಷ್ಪಮಾಲೆ, ಭಾಗವತ ತದೀಯಾರಾಧನೆ, ದೇವಾಲಯವನ್ನು ಗುಡಿಸಿ ಸಾರಿಸಿ ರಂಗವಲ್ಲಿ ಹಾಕುವುದು, ನೈವೇದ್ಯ ಸಮರ್ಪಿಸುವುದು ಇವೇ ಮುಂತಾದ ಭಗವಂತನಿಗೆ ಪ್ರಿಯವಾದ ಕೈಂಕರ್ಯಗಳನ್ನು ಭಕ್ತಿಯಿಂದ ಮಾಡಬೇಕು. ಅದು ಸಾಧ್ಯವಿಲ್ಲದಿದ್ದರೆ ಯದುಶೈಲ ಅಥವಾ ಮೇಲುಕೋಟೆ ಮುಂತಾದ ಯಾವುದಾದರೂ ಒಂದು ದಿವ್ಯವಾದ ವಿಷ್ಣುಕ್ಷೇತ್ರದಲ್ಲಿ ಒಂದು ಗುಡಿಸಲನ್ನಾದರೂ ಕಟ್ಟಿಕೊಂಡು ವಾಸಮಾಡಿ ಭಗವಂತನ ಸೇವೆ ಮಾಡುತ್ತಾ ಶಾಂತಿಯಿಂದ ಬಾಳಬೇಕು. ಅದು ಸಾಧ್ಯವಿಲ್ಲದಿದ್ದರೆ ದೇವರ ಮೇಲೆ ಭಾರ ಹಾಕಿ, ತಾನು ವಾಸ ಮಾಡುವ ಸ್ಥಳದಲ್ಲಿಯೇ ದ್ವಯ ಮಂತ್ರವನ್ನು ಉಚ್ಚರಿಸುತ್ತ ಅದರ ಅನುಸಂಧಾನ ಮಾಡಿ, ಅರ್ಥವನ್ನು ತಿಳಿದುಕೊಂಡು ಭಗವಂತನಲ್ಲಿ ಸದಾ ಭಕ್ತಿಯಿಂದ ಕೂಡಿರಬೇಕು. ಅದು ಸಾಧ್ಯವಿಲ್ಲದಿದ್ದರೆ ಒಬ್ಬ ಶ್ರೀವೈಷ್ಣವನ ಅಭಿಮಾನಕ್ಕಾದರೂ ಪಾತ್ರನಾಗುವಂತೆ ವರ್ತಿಸಬೇಕು. ಇದರ ಫಲವಾಗಿ ಜೀವಾತ್ಮನು ಉತ್ತಮ ಗತಿಯನ್ನು ಹೊಂದಿ ವಿಷ್ಣುವಿನ ಪಾದಾರವಿಂದವನ್ನು ಸೇರುವನು.

ಸರ್ವದೇಶ ದಶಾಕಾಲೇಷ್ವವ್ಯಾಹತ ಪರಾಕ್ರಮಾ ।
ರಾಮಾನುಜಾರ್ಯ ದಿವ್ಯಾಜ್ಞಾ ವರ್ಧತಾಮಭಿವರ್ಧತಾಂ ॥
ರಾಮಾನುಜಾರ್ಯ ದಿವ್ಯಾಜ್ಞಾ ಪ್ರತಿವಾಸರಮುಜ್ವಲಾ ।
ದಿಗಂತವ್ಯಾಪಿನೀ ಭೂಯಾತ್ಸಾಹಿಲೋಕ ಹಿತೈಷಿಣೀ ॥

## ೮. ರಾಮಾನುಜರ ಅಂತಿಮ ಸಂದೇಶ

ಹಿಂದಿನ ಜನ್ಮದಲ್ಲಿ ಮಾಡಿರುವ ಪಾಪಪುಣ್ಯಗಳಿಗೆ ಅನುಸಾರವಾಗಿ ಈ ಜನ್ಮದಲ್ಲಿ ಬರುವ ಕಷ್ಟಗಳಿಗಾಗಿ ಕುಗ್ಗದಿರಿ, ಸುಖಗಳಿಗಾಗಿ ಹಿಗ್ಗದಿರಿ.

ಆತ್ಮೋದ್ಧಾರಕ್ಕಾಗಿ ಸರಿಯಾದ ಗುರುವನ್ನು ಆಶ್ರಯಿಸಿ, ಅವರಲ್ಲಿ ಪೂರ್ಣ ನಂಬಿಕೆಯನ್ನು ಇಟ್ಟುಕೊಳ್ಳಿ.

ಭಗವಂತ, ಆಚಾರ್ಯ, ಭಕ್ತರು, ಇವರ ಹಿರಿಮೆಯನ್ನು ಸಾರುವ ಗ್ರಂಥಗಳನ್ನು ಆಗಾಗ ಅಧ್ಯಯನ ಮಾಡುತ್ತಿರಿ.

ನಿಸ್ವಾರ್ಥಿ, ನಿಸ್ಪೃಹ ಆದ ಸಾಧು ಸಂತರ ಸೇವೆ ಮಾಡಿ, ಚಿತ್ತಶುದ್ಧಿ ಗಳಿಸಿ, ಜ್ಞಾನಿ, ಭಕ್ತ, ಆಶಾರಹಿತ ಆದ ಶ್ರೀವೈಷ್ಣವರ ಸಹವಾಸದಲ್ಲಿ ಇದ್ದು, ಶ್ರೀವೈಷ್ಣವ ಸಿದ್ಧಾಂತವನ್ನು ಸರಿಯಾಗಿ ಅರಿತು ಆಚರಿಸಿ.

ಭಗವಂತನನ್ನು ಸೇರುವುದೇ ನಿಮ್ಮ ಜೀವನದ ಮುಖ್ಯ ಗುರಿ ಆಗಿರಲಿ.

ಭಗವಂತನಲ್ಲಿ ಸಂಪೂರ್ಣ ಶರಣಾಗತಿ ಮಾಡಿ, ಅನಂತರ ನಿಮ್ಮ ಭಾರವನ್ನು ಭಗವಂತನ ಅಥವಾ ಆಚಾರ್ಯರ ಮೇಲೆ ಹಾಕಿ, ಸದಾ ದ್ವಯಮಂತ್ರವನ್ನು ಜಪಿಸುತ್ತಿರಿ.

ದಿವ್ಯದೇಶಗಳ ದೇವಾಲಯಗಳನ್ನು ಸಂದರ್ಶಿಸಿ, ಅಲ್ಲಿ ಯಾವುದಾದರೊಂದು ಕೈಂಕರ್ಯವನ್ನು ನೆರವೇರಿಸಿ. ಅದು ಆಗದಿದ್ದರೆ ಅವುಗಳ ಸುಸ್ಥಿತಿಗೆ ನೆರವು ನೀಡಿ, ಅವುಗಳ ನಾಮಸ್ಮರಣೆ ಮಾಡಿ.

ಭಗವಂತನ ಸೇವೆಗಿಂತ ಭಾಗವತರ ಹಾಗೂ ದೀನದಲಿತರ ಸೇವೆ ಮಾಡಿದರೆ, ಭಗವಂತನು ಸುಪ್ರೀತನಾಗಿ ನಿಮ್ಮನ್ನು ತನ್ನ ಬಳಿಗೆ ಬೇಗ ಕರೆಸಿಕೊಳ್ಳುತ್ತಾನೆ.

ಪ್ರಾಪಂಚಿಕ ವಿಷಯಗಳತ್ತ ಎಳೆಯುವ ಭೋಗಭಾಗ್ಯಗಳಿಗೆ, ಜ್ಞಾನಕ್ಕೆ, ಮರುಳಾಗದಿರಿ, ಪಂಚೇಂದ್ರಿಯಗಳಿಗೆ ದಾಸರಾಗಬೇಡಿ. ಹಿರಿಯರ ಬಗ್ಗೆ ಮರ್ಯಾದೆಯಿಂದ ವರ್ತಿಸಿರಿ.

ಮೇಲು-ಕೀಳು, ಬಡವ-ಬಲ್ಲಿದ ಎಂಬ ಭೇದಭಾವವನ್ನು ಎಣಿಸದೆ ಎಲ್ಲರನ್ನೂ ವಿನಯದಿಂದಲೇ ಮಾತನಾಡಿಸಿ.

ಸ್ವಾಭಿಮಾನ ಹೊಂದಿದ್ದು, ಅಹಂಕಾರವನ್ನು ತ್ಯಜಿಸಿ, ಇದ್ದುದರಲ್ಲಿ ತೃಪ್ತಿ ಹೊಂದಿ, ನಿಸ್ವಾರ್ಥ ಜೀವನ ನಡೆಸಿ.

ಮನುಷ್ಯ ಜೀವನವು ಪರಾರ್ಥಕ್ಕಾಗಿ ಇದೆಯೇ ಹೊರತು ಸ್ವಾರ್ಥಕ್ಕಾಗಿ ಅಲ್ಲ ಎಂಬುದನ್ನು ಸದಾ ನೆನಪಿನಲ್ಲಿಟ್ಟುಕೊಂಡು ಬಾಳಿರಿ.

ಭಗವಂತನಿಗೆ ನಿವೇದನವಾದುದನ್ನೇ ಸ್ವೀಕರಿಸಿ.

ನಿಮ್ಮ ಉದ್ಯೋಗ ಮತ್ತು ಇತರ ಕೆಲಸಗಳಲ್ಲಿ ನೀವು ಮಾಡುವ ಕರ್ತವ್ಯ-ಕರ್ಮಗಳು, ಇಹಲೋಕದಲ್ಲಿ ಹಣ ಮತ್ತು ಯಶಸ್ಸು ಗಳಿಸುವ ಸಲುವಾಗಿ ಆಗದೆ ಭಗವಂತನ ಅಥವಾ ಜನತಾ ಜನಾರ್ದನನ ಸೇವೆಗಾಗಿ ಆಗುವಂತೆ ಎಚ್ಚರವಹಿಸಿ.

ಮುಖ್ಯವಾಗಿ ಭಾಗವತಾಪಚಾರಕ್ಕೆ ಅವಕಾಶ ಕೊಡದೆ, ಆಚಾರ್ಯರ ಅಭಿಮಾನಕ್ಕೆ ಪಾತ್ರರಾಗಿ, ಶ್ರೀಮನ್ನಾರಾಯಣನನ್ನೇ ಭಜಿಸುತ್ತ, ಅವನ ಕೈಂಕರ್ಯವನ್ನೇ ಪುರುಷಾರ್ಥವೆಂದೆಣಿಸಿ, ದ್ವಯಮಂತ್ರವನ್ನು ಅರ್ಥಸಹಿತ ಅನುಸಂಧಾನ ಮಾಡುತ್ತಿದ್ದರೆ, ಶ್ರೇಯಸ್ಸು ಉಂಟಾಗುವುದರಲ್ಲಿ ಸಂದೇಹವಿಲ್ಲ.

## ೯. ರಾಮಾನುಜರ ಜನ್ಮ ಕುಂಡಲಿ

| | | | |
|---|---|---|---|
| ಕುಜ | ರವಿ<br>ಬುಧ<br>ಶುಕ್ರ | ರಾಹು | ಚಂದ್ರ |
| ಗುರು | ಭಗವಾನ್<br>ರಾಮಾನುಜರ<br>ಜನ್ಮಕುಂಡಲಿ | | ಲಗ್ನ |
| | | | |
| ಶನಿ | ಕೇತು | | |

## ೧೦. ರಾಮಾನುಜ ಸಿದ್ಧಾಂತಸಾರ

ಆಸ್ಯೋಚಿತಾಂ ಪರಮ ವೈದಿಕ ದರ್ಶನಸ್ಯ
ರಾಮಾನುಜಾರ್ಯ ರಚಿತೋ ಪ್ರಕೃತಿಂ ಕೃತಜ್ಞಃ ।
ರಂಗೇಶ್ವರಃ ಪ್ರಕಟಯನ್ನ್ಯಥಯಾ ಬಭೂವ
ರಾಮಾನುಜಸ್ಯಮತಮಿತ್ಯಭಿದಾನಮಸ್ಯ ॥

ಮಾರ್ಗೇ ರಾಮಾನುಜೀಯೇ ಸಕಲ ಚಿದಚಿದಶ್ಚಾಂಶ ಶೇಷಾಃ ಶರೀರಂ
ಶೇಷೀ ನಾರಾಯಣಸ್ಸ್ಯಾನ್ನಿರವಧಿಗುಣಯುಗ್ಬ್ರಹ್ಮಲಕ್ಷ್ಮೀ ವಿಶಿಷ್ಟಃ ।
ಜೀವಾ ಬ್ರಹ್ಮಾಂಶ ಭೂತಾಃ ಪರಮನಮತಯಾ ದಿವ್ಯವೈಕುಂಠಲೋಕೇ
ಮುಕ್ತಿ ರ್ಭಕ್ತ್ಯಾ ಪ್ರಪತ್ಯಾಭವತಿಚನಿಯತಂ ಜ್ಞಾನಕರ್ಮೋಽಭಯೇನ ॥

ಸರ್ವೇವೇದಾಃ ಪ್ರಮಾಣಂ ತ್ರಿತಯಮನುಗುಣಂ ಸಾತ್ವಿಕಂ ಸಾರಶಾಸ್ತ್ರಂ
ಶ್ರೀಮನ್ನಾರಾಯಣಾಖ್ಯಂ ಚಿದಚಿದನುಗತಂ ಸದ್ಗುಣ ಶ್ಯೇಷಿ ತತ್ತ್ವಂ ।
ಭಕ್ತಿರ್ಮುಕ್ತೇರುಪಾಯಃ ಪ್ರಪದನಮಪಿ ತತ್ಸರ್ವ ಸತ್ತ್ವಾಧಿಕಾರ್ಯಂ
ಮುಕ್ತಿರ್ಲೋಕೇಪರಸ್ಮಿನ್ ಪರಭಜನಮಿತಿ ಶ್ರೀಮತಂ ವೈಷ್ಣವಾನಾಂ ॥

ಶ್ರೀಮಲ್ಲಕ್ಷ್ಮಣ ಯೋಗಿನಸ್ತ್ರಿಭುವನಂ ಸತ್ಯಂ ತದೀಶಃ ಶ್ರೀಯಃ
ಕಾಂತೋ ಬ್ರಹ್ಮ ಸಏವ ಸೋಽಖಿಲತನುಃ ಭಿನ್ನಾಸ್ತತಶ್ಚೇತನಾಃ ।

ಸತ್ಯಾಸಂಸ್ಸೃತಿ ರೀಶ ನಿಗ್ರಹ ಕೃತಾ ಮುಕ್ತಿಸ್ತು ಭಕ್ತ್ಯಾದಿನಾ
ತತ್ಪ್ರಾಪ್ತಿಃ ಪರಮೇಪದೇ ತದನುಭೂತ್ಯಾಖ್ಯೇತಿ ಸಂಚಕ್ಷಸೇ ||

ಆತ್ಮೈಕ್ಯಂ ದೇವತೈಕ್ಯಂ ತ್ರಿಕಸಮಧಿಗತಾತುಲ್ಯತೈಕ್ಯಂ ತ್ರಯಾಣಾಂ
ಅನ್ಯ ತ್ರೈಶ್ವರ್ಯ ಮಿತ್ಯಾದ್ಯ ನಿಪುಣ ಫಣಿತಿರಾದ್ರಿಯಂ ತೇನ ಸಂತಃ |
ತ್ರಯ್ಯಂತ್ಯೈರೇಕ ಕಂಠ್ಯೈರ್ತದನುಗುಣ ಮನುವ್ಯಾಸ ಮುಖ್ಯೋಕ್ತಿಭಿಶ್ಚ
ಶ್ರೀಮನ್ನಾರಾಯಣೋ ನಃ ಪತಿರಖಿಲತನುಃ ಮುಕ್ತಿದೋ ಮುಕ್ತಿಭೋಗ್ಯಃ ||

ಯತಿಕ್ಷ್ಮಾಭೃದ್ದೃಷ್ಟಂ ಮತಮಿಹ ನವೀನಂ ತದಪಿಕಿಂ
ತತಃ ಪ್ರಾಗೇವಾನ್ಯದ್ವದ ತದಪಿ ಕಿಂ ವರ್ಣ ನಿಕಷೇ |
ನಿಶಾಮ್ಯಂತಾಂ ಯದ್ವಾ ನಿಜಮತಿ ತಿರಸ್ಕಾರ ವಿಗಮಾತ್
ನಿರಾತಂಕಾಷ್ಟಂಕ ದ್ರಮಿಡ ಗುಹದೇವಪ್ರಭೃತಯಃ ||

ದೃಷ್ಟೇಽಪ ಹ್ಯೂಕ್ಯ ಭಾವಾದನು ಮಿತಿ ವಿಷಯೇ ಲಾಘವಸ್ಯಾಮಸಾರಾತ್
ಶಾಸ್ತ್ರೇಣೈವಾನಪೇಯೇ ವಿಹತಿ ವಿರಹಿತೇ ನಾಸ್ತಿಕತ್ವ ಪ್ರಹಾಣಾತ್ |
ನಾಥೋಪಜ್ಞಂ ಪ್ರವೃತ್ತಂ ಬಹುಭಿರುಪಚಿತಂ ಯಾಮುನೇಯ ಪ್ರಬಂಧೈಃ
ತ್ರಾತುಂ ಸಮ್ಯಗ್ಯತೀಂದ್ರೈರಖಿಲತಮಃ ಕರ್ಶನಂ ದರ್ಶನಂಚ ||

ಲಕ್ಷ್ಮೀನಾಥಾಖ್ಯಸಿಂಧೌ ಶಠರಿಪುಜಲದಃ ಪ್ರಾಪ್ಯಕಾರುಣ್ಯನೀರಂ
ನಾಥಾದ್ರಾವಭ್ಯಷಿಂಚತ್ತದನು ರಘುವರಾಂಭೋಜ ಚಕ್ಷುರ್ಝರಾಭ್ಯಾಂ |
ಗತ್ವಾತಾಂ ಯಾಮುನಾಖ್ಯಾಂ ಸರಿತಿಮಥಯತೀಂದ್ರಾಖ್ಯ ಪದ್ಮಾಕರೇಂದ್ರಃ
ಸಂಪೂರ್ಯಪ್ರಾಣಿಸಸ್ಯೇ ಪ್ರವಹತಿ ಸತತಂ ದೇಶಿಕೇಂದ್ರ ಭ್ರಮೌ ಘ್ಯೈಃ ||

## ೧೧. ರಾಮಾನುಜರ ವಿಶಿಷ್ಟಾದ್ವೈತ ವೇದಾಂತ

ವಿಶಿಷ್ಟಾದ್ವೈತ ವೇದಾಂತ ಅಥವಾ ಶ್ರೀವೈಷ್ಣವ ಮತದಲ್ಲಿ ಪ್ರಮೇಯ (ಜ್ಞಾನದ ವಸ್ತು) ಮತ್ತು ಪ್ರಮಾಣ (ಜ್ಞಾನದ ಸಾಧನ) ಎಂಬ ಎರಡು ವಿಭಾಗಗಳಿವೆ.

**ಪ್ರಮೇಯ :**

ಪ್ರಮೇಯದಲ್ಲಿ ತತ್ತ್ವ, ಹಿತ, ಪುರುಷಾರ್ಥಗಳೆಂಬುದಾಗಿ ಮೂರು ವಿಧ. ದರ್ಶನದಲ್ಲಿ ತಿಳಿದುಕೊಳ್ಳಬೇಕಾದ ವಸ್ತುವೇ ತತ್ತ್ವ; ತಿಳಿದುಕೊಂಡು ಹೊಂದಬೇಕಾದ ಫಲ ಅಂದರೆ ಎಂದೆಂದಿಗೂ ಅಳಿವು ಇಲ್ಲದ ಪ್ರಯೋಜನವೇ ಪುರುಷಾರ್ಥ; ಈ ಫಲವನ್ನು ಪಡೆಯಲು ಅನುಷ್ಠಿಸಬೇಕಾದ ಉಪಾಯ ಅಂದರೆ ಅನುಸರಿಸಬೇಕಾದ ಮಾರ್ಗವೇ ಹಿತ ಅಥವಾ ಸಾಧನ.

**ಅ. ತತ್ತ್ವ :**

ತತ್ತ್ವದಲ್ಲಿ ಅಚಿತ್, ಚಿತ್, ಈಶ್ವರ ಎಂದು ಮೂರು ಉಂಟು.

೧. **ಅಚಿತ್** : ಜ್ಞಾನವೆಂಬ ಗುಣ ಇಲ್ಲದಿರುವ, ಅಂದರೆ ತನ್ನನ್ನು ತಾನೇ ತಿಳಿಯುವ ಶಕ್ತಿ ಇಲ್ಲದ, ಸರ್ವದಾ ವಿಕಾರ ಹೊಂದುತ್ತಿರುವ ಅಂದರೆ ಬೇರೆ ಬೇರೆ ಅವಸ್ಥೆಗಳನ್ನು ಪಡೆಯುತ್ತಿರುವ, ಅಚಿತ್ ಅಥವಾ ಚೈತನ್ಯವಿಲ್ಲದುದು ತ್ರಿಗುಣ, ಕಾಲ, ಶುದ್ಧ ಸತ್ವ ಎಂದು ಮೂರು ವಿಧ.

(i) ಈ ಜಗತ್ತಾಗಿ ಪರಿಣಮಿಸುವ ತ್ರಿಗುಣ ಅಥವಾ ಪ್ರಕೃತಿಯು ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳೂ ಸೇರಿನುವ ೨೪ ತತ್ವಗಳಿಂದಾಗಿದೆ. ಕಾರ್ಯಕಾರಣ ರೂಪದಿಂದ, ಉತ್ತರೋತ್ತರಾವಸ್ಥಾ ಭೇದಗಳಿಂದ ಪ್ರಕೃತಿಯು ೨೪ ತತ್ತ್ವಗಳಾಗಿ ಪರಿಣಮಿಸುತ್ತದೆ ಎನ್ನಬಹುದು. ಇದು ಮೇಲೆ, ಕೆಳಗೆ, ಸುತ್ತಲೂ, ಎಂಟು ದಿಕ್ಕುಗಳಲ್ಲಿಯೂ ವ್ಯಾಪಿಸಿಕೊಂಡಿದೆ. ಮೂಲ ಪ್ರಕೃತಿ; ಮಹತ್; ಅಹಂಕಾರ; ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳು; ಶ್ರೋತ್ರ, ತ್ವಕ್, ಚಕ್ಷು, ಜಿಹ್ವಾ, ಘ್ರಾಣ ಎಂಬ ಐದು ಜ್ಞಾನೇಂದ್ರಿಯಗಳು:

ಮನಸ್ಸು ಎಂಬ ಅಂತರಿಂದ್ರಿಯ ; ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ತನ್ಮಾತ್ರೆಗಳು: ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ ಎಂಬ ಐದು ಮಹಾಭೂತಗಳು-ಇವು ಪ್ರಕೃತಿಯ ೨೪ ತತ್ತ್ವಗಳು. ಪ್ರಕೃತಿಯೇ ಮೊದಲಾಗಿ, ಪೃಥ್ವಿ ಕೊನೆಯಾದ ಈ ೨೪ ಅಚಿತ್ ತತ್ತ್ವಗಳಲ್ಲಿ ಹಿಂದಿನ ತತ್ತ್ವಗಳಿಂದ ಮುಂದಿನ ತತ್ತ್ವಗಳು ಹುಟ್ಟುತ್ತವೆ.

(ii) ಕಾಲವು ಕ್ಷಣ, ಮುಹೂರ್ತ, ಹಗಲು, ರಾತ್ರಿ, ದಿನ, ವಾರ, ಪಕ್ಷ, ಮಾಸ, ಋತು, ಆಯನ, ಸಂವತ್ಸರ, ಯುಗ, ಮನ್ವಂತರ, ಪರಾರ್ಧ ಆದಿವಿಭಾಗವುಳ್ಳದ್ದು ಆಗಿ, ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಸಹಾಯಕ ಕಾರಣವಾಗಿ ಎಲ್ಲವನ್ನೂ ಆವರಿಸಿಕೊಂಡಿದೆ.

(iii) ರಜಸ್ಸು, ತಮಸ್ಸು ಇಲ್ಲದಿರುವ, ಸ್ವಯಂಪ್ರಕಾಶವುಳ್ಳ, ಸುಖ, ಆನಂದಮಯ ಆಗಿರುವ, ಶುದ್ಧ ಸತ್ತ್ವವು ಮುಕ್ತ, ನಿತ್ಯ, ಪರಮಾತ್ಮ ಇವರ ಶರೀರ ಮತ್ತು ಪರಮಪದ ಎಂಬ ವೈಕುಂಠಲೋಕ ಆಗಿದೆ. ಇದೇ ಪಂಚೋಪನಿಷನ್ಮಯ, ಪಂಚಶಕ್ತಿಮಯ ಎನಿಸಿ ಕೊಂಡಿದೆ.

೨. **ಚಿತ್** : ದೇಹ, ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿಗಳಿಗಿಂತ ಬೇರೆ, ವಿಲಕ್ಷಣ ಆಗಿರುವ ಚಿತ್ ಅಥವಾ ಚೇತನನು ನಿತ್ಯ, ಅಜಡ, ಆನಂದರೂಪಿ, ಅಣುಸ್ವರೂಪಿ, ಅವ್ಯಕ್ತ, ನಿರವಯವ, ನಿರ್ವಿಕಾರ, ಜ್ಞಾನಾಶ್ರಯ, ಕರ್ತಾ, ಭೋಕ್ತಾ, ಜ್ಞಾನ ಸ್ವರೂಪಿ, ಈಶ್ವರ ನಿಯಾಮ್ಯ, ಈಶ್ವರ ಶೇಷ ಆಗಿ ಅಸಂಖ್ಯಾತನಾಗಿದ್ದಾನೆ. ಈ ಸ್ವಯಂ ಪ್ರಕಾಶಿಸುವ ಗುಣವುಳ್ಳ ಜೀವಾತ್ಮರಲ್ಲಿ ಬದ್ಧ, ಕೇವಲ, ಮುಮುಕ್ಷು, ಮುಕ್ತ, ನಿತ್ಯ ಎಂದು ಐದು ವಿಧ.

(i) ಅನಾದಿ ಕಾಲದಿಂದಲೂ ಕರ್ಮದ ನಿಯಮಗಳಿಗೆ ಒಳಪಟ್ಟು, ಕೆಟ್ಟ ಮತ್ತು ಒಳ್ಳೆಯ ಕರ್ಮಗಳ ಫಲವನ್ನು ಅನುಭವಿಸುವ ಸಲುವಾಗಿಯೇ ಈ ಜಗತ್ತಿನಲ್ಲಿ ಸುರ, ನರ, ಪ್ರಾಣಿ, ಸಸ್ಯಗಳ ರೂಪದಲ್ಲಿ ಹುಟ್ಟುತ್ತ ಇರುವವರು ಬದ್ಧ ಸಂಸಾರಿಗಳು.

(ii) ಸಂಸಾರದಲ್ಲಿ ಉಪೇಕ್ಷೆ, ಜಿಗುಪ್ಸೆ ಹೊಂದಿ, ಆತ್ಮಾನುಭವದಲ್ಲಿ ತೃಪ್ತರಾಗಿರುವವರು ಕೇವಲರು.

(iii) ಮೋಕ್ಷ ಪಡೆಯಬೇಕೆಂಬ ಇಚ್ಛೆಯುಳ್ಳವರು ಮುಮುಕ್ಷುಗಳು.

(iv) ಒಮ್ಮೆ ಬದ್ಧ ಜೀವಿಗಳಾಗಿದ್ದು ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿಗಳೆಂಬ ಸಾಧನಗಳ ಮೂಲಕ, ಭಗವಂತನ ಅನುಗ್ರಹದಿಂದ, ಹುಟ್ಟು-ಸಾವುಗಳ ಸಂಸಾರ ಚಕ್ರದಿಂದ ಬಿಡುಗಡೆ ಹೊಂದಿ, ವೈಕುಂಠಲೋಕದಲ್ಲಿ ನಿತ್ಯಸೂರಿಗಳೊಂದಿಗೆ ಪರಮಾತ್ಮನೊಡನೆ ಆನಂದಾನುಭವದಲ್ಲಿ ಇರುವವರು ಮುಕ್ತರು.

(v) ಪುಣ್ಯ ಪಾಪ ರೂಪವಾದ, ಕರ್ಮದ ಸೋಂಕೇ ಇಲ್ಲದ ಸಂಸಾರ ಬಂಧನಕ್ಕೆ ಒಳಗಾಗದ, ಭಗವಂತನ ಬಳಿ ಅವನ ಕೈಂಕರ್ಯವನ್ನು ಮಾಡುತ್ತಾ ಆನಂದದಿಂದ ಇರುವವರು ನಿತ್ಯರು.

೨೪ ಪ್ರಕೃತಿ ತತ್ತ್ವಗಳಿಂದ ಕೂಡಿರುವ ಜೀವನು ೨೫ನೆಯ ತತ್ತ್ವ.

೩. ಈಶ್ವರ : ೨೬ನೆಯ ತತ್ತ್ವವೆನಿಸಿದ ಈಶ್ವರನೇ ಪರಬ್ರಹ್ಮ. ಯಾವ ಹೇಯಗುಣಗಳೂ ಇಲ್ಲದ, ಸಕಲ ಕಲ್ಯಾಣಗುಣಗಳನ್ನೂ ಹೊಂದಿರುವ, ಲಕ್ಷ್ಮೀಸಮೇತನಾದ ನಾರಾಯಣನು ಚಿತ್, ಅಚಿತ್ ಎಂಬ ಎರಡೂ ತತ್ತ್ವಗಳನ್ನು ತನಗೆ ವಿಶೇಷಣ, ಶರೀರವನ್ನಾಗಿ ಹೊಂದಿದ್ದು, ಅವುಗಳಿಗೆ ಆಧಾರ, ಸ್ವಾಮಿ ಆಗಿ, ಎಲ್ಲ ದೇಶ ಕಾಲಗಳಲ್ಲೂ ಎಲ್ಲ ಚೇತನ-ಅಚೇತನಗಳಲ್ಲಿ ಅಂತರ್ಯಾಮಿಯಾಗಿದ್ದುಕೊಂಡು, ಸೃಷ್ಟಿ ಸ್ಥಿತಿ ಸಂಹಾರವೆಂಬ ಜಗದ್ವ್ಯಾಪಾರಗಳನ್ನು ನಡೆಸುತ್ತಾನೆ. ಆದರೂ ಅವನಿಗೆ ಯಾವ ಗುಣದೋಷಗಳೂ ಅಂಟುವುದಿಲ್ಲ. ಸರ್ವಜ್ಞ, ಸರ್ವವ್ಯಾಪಿ, ಸರ್ವಶಕ್ತ, ಸರ್ವರಕ್ಷಕ, ಸತ್ಯಜ್ಞಾನ, ಆನಂದ, ಅನಂತಕಲ್ಯಾಣ ಗುಣಾಕರ ಆದ ಅವನೇ ಜಗತ್ತಿನ ಉಪಾದಾನ ಹಾಗೂ ನಿಮಿತ್ತಕಾರಣನಾಗಿದ್ದಾನೆ. ವಿವಿಧ ರೀತಿಯ ಜನರ ಆಸೆಯನ್ನು ಪೂರೈಸುವ ಸಲುವಾಗಿ ಅವನಿಗೆ ಪರ, ವ್ಯೂಹ, ವಿಭವ, ಹಾರ್ದ, ಅರ್ಚಾ ಎಂಬ ಐದು ರೂಪಗಳುಂಟು. ಮೊದಲಿನ ನಾಲ್ಕು ರೂಪಗಳು ಎಲ್ಲರಿಗೂ ಕಾಣಿಸದಿದ್ದರೂ ಮನೆ-ದೇವಾಲಯಗಳಲ್ಲಿರುವ ಅರ್ಚಾರೂಪವನ್ನು ಸೇವಿಸಿ, ಎಲ್ಲರೂ ತಮ್ಮ ಜನ್ಮವನ್ನು ಸಾರ್ಥಕಪಡಿಸಿಕೊಳ್ಳಲು ಸಾಧ್ಯವಿದೆ.

(ಆ). ಹಿತ

ಜೀವನದಲ್ಲಿ ತತ್ತ್ವದ ಸರಿಯಾದ ತಿಳಿವಳಿಕೆ ಉಂಟಾಗುವ ದಿವ್ಯವಾದ ಆನಂದಾನುಭವವನ್ನು ಪಡೆಯಬೇಕೆಂಬ ಆಸೆ ಹುಟ್ಟಿದಾಗ ಅಂದರೆ ಪುರುಷಾರ್ಥವು ಲಭಿಸಲು ಸಹಾಯ ಮಾಡುವ ಉಪಾಯವನ್ನು ಜೀವನು ಹುಡುಕುತ್ತಾನೆ. ಇದಕ್ಕೆ ಭಕ್ತಿಯೋಗವೇ ಸರಿಯಾದ ಸಾಧನವಾದರೂ, ಕರ್ಮಜ್ಞಾನಗಳ ನಂತರವೇ ಭಕ್ತಿ ಮಾಡುವುದು ಒಳ್ಳೆಯದು.

೧) ತಮ್ಮ ಪಾಲಿಗೆ ಬಂದ ಕರ್ತವ್ಯ ಕರ್ಮಗಳನ್ನು ನಾನು, ನನ್ನದು ಎಂಬ ಅಹಂಕಾರ ಮಮಕಾರಗಳಿಲ್ಲದೆ, ಫಲಾಪೇಕ್ಷೆ ಇಲ್ಲದೆ ಮಾಡುವುದು ಕರ್ಮಯೋಗ.

೨) ಕರ್ಮದಿಂದ ಸುಪ್ರೀತನಾದ ಭಗವಂತನು ಜೀವಿಗೆ ಇಂದ್ರಿಯ ನಿಗ್ರಹ ಶಕ್ತಿಯನ್ನು ಕರುಣಿಸಿದಾಗ, ಜೀವಿಯು ತನ್ನ ಆತ್ಮದ ಅರಿವಿಗಾಗಿ ಆತ್ಮಾವಲೋಕನದಲ್ಲಿ ತೊಡಗುವುದು ಜ್ಞಾನಯೋಗ.

೩) ಇದು ಸಾಧಿಸಿದ ನಂತರ ಜೀವಾತ್ಮನು ಭಗವಂತನಲ್ಲಿ ಶ್ರದ್ಧೆ ಪ್ರೀತಿಗಳಿಂದ ಕೂಡಿದ್ದು, ಪರಮಾತ್ಮನಲ್ಲದ ಇತರ ವಸ್ತು-ವಿಷಯ-ವ್ಯಕ್ತಿಗಳಲ್ಲಿ ತನ್ನ ಮನಸ್ಸನ್ನು ಹರಿಸದೆ, ಭಗವಂತನನ್ನು ಏಕಾಗ್ರಚಿತ್ತದಿಂದ ನಿರಂತರವಾಗಿ ಧ್ಯಾನಿಸುವುದು ಭಕ್ತಿಯೋಗ. ಈ ಪರಭಕ್ತಿಯು, ಪರಜ್ಞಾನ, ಪರಮಭಕ್ತಿಗಳನ್ನು ಉಂಟುಮಾಡುತ್ತದೆ.

೪) ಅತಿ ಕಷ್ಟವಾದ ಜ್ಞಾನಯೋಗ, ಅತಿ ಸುಲಭವಲ್ಲದ ಭಕ್ತಿಯೋಗ ಇವು ಕೆಲವರಿಗೆ ಮಾತ್ರ ಸಾಧ್ಯ. ಜ್ಞಾನ, ಶಕ್ತಿ, ಉಚ್ಚಕುಲದಲ್ಲಿ ಜನ್ಮ, ಇವು ಇಲ್ಲದವರಿಗಾಗಿ, ಭಕ್ತಿ ಮಾಡಲು ಆಗದವರಿಗಾಗಿ ಪ್ರಪತ್ತಿಯೋಗವು ಹೇಳಲ್ಪಟ್ಟಿದೆ. ಭಗವಂತನಿಗೆ ಅನುಕೂಲವಾಗಿ ನಡೆದುಕೊಳ್ಳುವ ಸಂಕಲ್ಪಮಾಡುವುದು, ಅವನಿಗೆ ಪ್ರತಿಕೂಲನಾಗದೆ ಅವನ ಆಜ್ಞೆಗಳಿಗೆ ವಿರೋಧವಾಗಿ ನಡೆದುಕೊಳ್ಳದಿರುವುದು, ಬೇರೆ ಆಶ್ರಯ-ಶಕ್ತಿ-ಸಾಧನಗಳು ಇಲ್ಲದಿರುವುದು, ಅವನೊಬ್ಬನೇ ತನಗೆ ಉಪಾಯವೆಂಬ ನಂಬಿಕೆಯಿಂದ ಅವನಲ್ಲಿ ಮಹಾವಿಶ್ವಾಸ ಹೊಂದಿರುವುದು, ತನ್ನ ಉದ್ಧಾರ ರಕ್ಷಣೆಗಳಿಗಾಗಿ ಅವನಲ್ಲಿ ಮೊರೆಯಿಡುವುದು - ಈ ಐದು ಅಂಶಗಳು ಪ್ರಪತ್ತಿಯೋಗವನ್ನು ಅನುಸರಿಸುವವರಲ್ಲಿ ಇರಬೇಕಾಗುತ್ತದೆ.

೫) ದೈವಸಾಕ್ಷಾತ್ಕಾರಕ್ಕಾಗಿ ನಡೆಯುವ ಮನುಷ್ಯ ಪ್ರಯತ್ನದಲ್ಲಿ ಆಚಾರ್ಯನ ಅನುಗ್ರಹ ಜೀವಿಯ ಮೇಲೆ ಆದರೆ ಇನ್ನೂ ಉತ್ತಮ.

ಪ್ರಪತ್ತಿಯನ್ನು ಮಾಡಿದ ನಂತರ ತಾನು ಮಾಡುವ ಕೆಲಸಗಳೆಲ್ಲವೂ ಭಗವಂತನ ಕೈಂಕರ್ಯವೆಂದೇ ತಿಳಿದು, ಕರ್ತೃತ್ವವನ್ನು ಬಿಟ್ಟು, ನಿಷ್ಕಾಮ ಭಾವನೆಯಿಂದ ಮಾಡುತ್ತ ಬಂದರೆ, ಭಗವಂತನ ಅನುಗ್ರಹದಿಂದ ಸುಖ ಶಾಂತಿ ಸಮಾಧಾನಗಳು ದೊರಕಿ ಇಹದಲ್ಲಿಯೂ ಮೋಕ್ಷಸದೃಶ ಜೀವನವನ್ನು ನಡೆಸಬಹುದು.

(೯). ಪುರುಷಾರ್ಥ

ಪುರುಷರಿಂದ ಅಪೇಕ್ಷಿಸಲ್ಪಡತಕ್ಕವು ಅಥವಾ ಅವರಿಗೆ ಪ್ರಯೋಜನವಾಗುವಂಥವು ಪುರುಷಾರ್ಥ. ಇವು ನಾಲ್ಕು.

೧) ಪ್ರಾಣಿಗಳ ರಕ್ಷಣಾರ್ಥವಾಗಿ ಮಾಡುವ ಶಾಸ್ತ್ರೀಯ ಕಾರ್ಯಗಳು ಧರ್ಮ.

೨) ವರ್ಣಾಶ್ರಮಗಳಿಗೆ ಉಚಿತವಾಗಿದ್ದು, ಧರ್ಮಕ್ಕೆ ಕುಂದು ಬರದಂತೆ ಸಂಗ್ರಹಿಸಿದ ಧನ ಧಾನ್ಯ ಮುಂತಾದುವು ಅರ್ಥ.

೩) ಧನಧಾನ್ಯ, ವಸ್ತು ಭೂಷಣ, ಪುತ್ರ ಮಿತ್ರ ಕಳತ್ರ, ಪಶು ಗೃಹ ಕ್ಷೇತ್ರ, ಚಂದನ ಕುಸುಮ ತಾಂಬೂಲ ಮುಂತಾದ ಪದಾರ್ಥಗಳಲ್ಲಿ ವಿಷಯಾನುಭವದಿಂದ ಉಂಟಾಗುವುದು

ಐಹಿಕ ಕಾಮ; ಸ್ವರ್ಗಾದಿ ಲೋಕಗಳಲ್ಲಿ ಹಸಿವು, ಬಾಯಾರಿಕೆ, ಮೋಹ, ಶೋಕ, ಮುಪ್ಪು ಮರಣಗಳಿಲ್ಲದೆ ವಿಷಯಾನುಭವದಿಂದ ಸುಖ ಪಡುವುದು ಪಾರಲೌಕಿಕ ಕಾಮ. ಹೀಗೆ ಕಾಮದಲ್ಲಿ ಎರಡು ವಿಧ.

೪) ಭಗವಂತನ ಆಶ್ರಯದ ಬಲದಿಂದ ಪುಣ್ಯ-ಪಾಪಗಳು ಕಳೆದ ನಂತರ ಸ್ಥೂಲ ಶರೀರವನ್ನು ತ್ಯಜಿಸಿ, ಸೂಕ್ಷ್ಮ ಶರೀರದಿಂದ ಅರ್ಚಿರಾದಿ ಮಾರ್ಗದಲ್ಲಿ ಹೋಗಿ, ವಿರಜಾ ನದಿಯಲ್ಲಿ ಸ್ನಾನ ಮಾಡಿ ಸೂಕ್ಷ್ಮ ಶರೀರವನ್ನು ನೀಗಿ, ಶ್ರೀಭೂನೀಳಾ ಸಮೇತವಾಗಿ ದಿವ್ಯ ಮಂಟಪದಲ್ಲಿ ದಿವ್ಯ ಸಿಂಹಾಸನದಲ್ಲಿ ಆದಿಶೇಷನ ಮೇಲೆ ಕುಳಿತಿರುವ ಶ್ರೀಮನ್ನಾರಾಯಣನನ್ನು ಅನುಭವಿಸುತ್ತ ನಿತ್ಯ ಕೈಂಕರ್ಯದಿಂದ ನಿತ್ಯಾನಂದವನ್ನು ಪಡೆಯುವುದು ಮೋಕ್ಷ.

ಮುಖ್ಯವಾಗಿ ಶ್ರೀವೈಕುಂಠಲೋಕದಲ್ಲಿ ಸದಾ ಭಗವಂತನ ಕೈಂಕರ್ಯ ಪೂರ್ಣ ಆನಂದಾನುಭವ ಸಿಗುವುದೇ ಪರಮ ಪುರುಷಾರ್ಥ. ಪ್ರಪತ್ತಿ ಮಾಡಿದವನಿಗೆ ಇದರ ಸವಿ ಇಹ ಲೋಕದಲ್ಲಿಯೂ ಸಿಗುತ್ತದೆ. ಕಾಲಬಂದಾಗ ಭಗವಂತನು ಜೀವಾತ್ಮನನ್ನು ಇಹಲೋಕದ ಪಾಂಚ ಭೌತಿಕವಾದ ಶರೀರದಿಂದ ಬಿಡಿಸಿ, ಪ್ರಕಾಶಮಾನವಾದ ಅರ್ಚಿರಾದಿ ಮಾರ್ಗದಲ್ಲಿ ವೈಕುಂಠಕ್ಕೆ ಕರೆಸಿಕೊಳ್ಳಲು ಏರ್ಪಾಡು ಮಾಡುತ್ತಾನೆ.

೫. ಪ್ರಮಾಣ

ಯಥಾರ್ಥವಾದ ಜ್ಞಾನಾನುಭವವನ್ನು ಮಾಡಿಕೊಡುವುದು ಪ್ರಮಾಣವೆನಿಸುತ್ತದೆ.

೧) ನಮ್ಮ ಇಂದ್ರಿಯಗಳಿಗೂ ಪದಾರ್ಥಗಳಿಗೂ ಸಂಬಂಧವುಂಟಾಗಿ ಸನ್ನಿಕರ್ಷದಿಂದ ಮನಸ್ಸಿನ ಮೂಲಕ ಆತ್ಮನಿಗೆ ಸಾಕ್ಷಾತ್ತಾಗಿ ಗೋಚರವಾಗುವುದೇ ಪ್ರತ್ಯಕ್ಷ ಅನುಭವ. ಇದಕ್ಕೆ ಸಾಧನವಾದ ಇಂದ್ರಿಯಗಳು ಪ್ರತ್ಯಕ್ಷ ಪ್ರಮಾಣ. ಮುಖ್ಯವಾಗಿ ಪ್ರತ್ಯಕ್ಷಾನುಭವಕ್ಕೆ ಪದಾರ್ಥ, ಪಂಚೇಂದ್ರಿಯ, ಮನಸ್ಸು, ಆತ್ಮ ಎಲ್ಲವೂ ಕಾರ್ಯಗತವಾಗಿದ್ದು ಸಹಕರಿಸಬೇಕು.

೨) ಸಾಹಚರ್ಯ ನಿಯಮವೆಂಬ ವ್ಯಾಪ್ತಿ ಜ್ಞಾನವೇ ಅನುಮಾನ ಪ್ರಮಾಣ. ಪರಾಮರ್ಶ ಜ್ಞಾನವೇ ವ್ಯಾಪಾರ. ಎರಡು ವಸ್ತುಗಳು ಒಂದನ್ನೊಂದು ಎಡಬಿಡದೆ ಜೊತೆ ಜೊತೆಯಲ್ಲಿಯೇ ಇರುವುದನ್ನು ಕಂಡಿದ್ದು, ಅವೆರಡರಲ್ಲಿ ಒಂದು ವಸ್ತುವನ್ನು ಕಂಡಾಗ, ಇನ್ನೊಂದು ವಸ್ತುವೂ ಅಲ್ಲಿ ಇರಲೇಬೇಕು ಎಂದು ನಿರ್ಣಯಿಸುವುದು ಅನುಮಾನ. ಇದರಲ್ಲಿ ಪ್ರತಿಜ್ಞಾ, ಹೇತು, ಉದಾಹರಣೆ, ಉಪನಯ, ನಿಗಮನ ಎಂಬ ಐದು ಮೆಟ್ಟಿಲುಗಳುಂಟು.

೩) ಇದ್ದುದನ್ನು ಇದ್ದಂತೆ ತಿಳಿದು ಹೇಳುವ ಆಪ್ತವಾಕ್ಯವೇ ಶಬ್ದ ಪ್ರಮಾಣ. ಪದ ಜ್ಞಾನವೇ ಕರಣ, ಪದಾರ್ಥ ಜ್ಞಾನವೇ ದ್ವಾರ, ಶಬ್ದಬೋಧವೇ ಫಲ. ವೇದ, ಸ್ಮೃತಿ, ಆಗಮ, ಪುರಾಣ, ಇತಿಹಾಸ, ದಿವ್ಯಪ್ರಬಂಧ ಇವೆಲ್ಲ ಶಬ್ದ ಪ್ರಮಾಣದಲ್ಲಿ ಸೇರಿವೆ.

ಮುಖ್ಯವಾಗಿ ವಿವಿಧ ವಸ್ತು ವಿಷಯ ವ್ಯಕ್ತಿಗಳ ಸಂಪರ್ಕವು ಇಂದ್ರಿಯಗಳ ಮೂಲಕ ಆದಾಗ, ಸರಿಯಾಗಿ ತರ್ಕ ಅಥವಾ ವಿಚಾರ ಮಾಡಿದಾಗ, ವೇದ ಉಪನಿಷತ್ತು ಪುರಾಣ ಆಗಮ

ಇತಿಹಾಸ ದಿವ್ಯ ಪ್ರಬಂಧ ಮುಂತಾದುವನ್ನು ಸರಿಯಾಗಿ ಅಧ್ಯಯನ ಮಾಡಿದಾಗ, ಜ್ಞಾನ ಅಥವಾ ತಿಳುವಳಿಕೆ ಉಂಟಾಗುತ್ತದೆ. ಈ ಮೂರೂ ಪ್ರಮಾಣಗಳಿಂದ ಪಡೆದ ಜ್ಞಾನವು ಜೀವಿಯು ಉತ್ತಮ ಜೀವನವನ್ನು ನಡೆಸಲು ಹಾಗೂ ಭಗವಂತನ ಅನುಗ್ರಹ - ಅನುಭವಗಳನ್ನು ಪಡೆಯಲು ಸಹಾಯ ಮಾಡುತ್ತದೆ.

## ೧೨. ರಾಮಾನುಜ ಸ್ತುತಿ

**(i) ಧ್ಯಾನ ಶ್ಲೋಕಗಳು**

ಪ್ರತ್ಯಾಂ ಭೋಜವಿಕಾಸಾಯ ಪಾಪಾಧ್ವಾಂತಕ್ಷಯಾಯಚ ।
ಶ್ರೀಮಾನಾವಿರಭೂತ್‌ಭೂಮೌ ರಾಮಾನುಜ ದಿವಾಕರಃ

ತಸ್ಮೈರಾಮಾನುಜಾರ್ಯಾಯ ನಮಃ ಪರಮಯೋಗಿನೇ ।
ಯಃ ಶ್ರುತಿ ಸ್ಮೃತಿ ಸೂತ್ರಾಣಾಂ ಅಂತರ್ಜ್ವರ ಮಶೀಶಮತ್ ॥

ಚಿದಚಿತ್ಪರ ತತ್ತ್ವಾನಾಂ ತತ್ತ್ವ ಯಾಥಾರ್ಥವೇದಿನೇ ।
ರಾಮಾನುಜಾಯಮುನಯೇ ನಮೋ ಮಮ ಗರೀಯಸೇ ॥

ಉಪವೀತಿನಮೂರ್ಧ್ವಪುಂಡ್ರವಂತಂ
ತ್ರಿಜಗತ್ಪುಣ್ಯ ಫಲಂ ತ್ರಿದಂಡ ಹಸ್ತಂ ।
ಶರಣಾಗತ ಸಾರ್ಥವಾಹಮೀಡೇ
ಶಿಖಿಯಾಶೇಖರಿಣಂ ಪತಿಂಯತೀನಾಂ ॥

ನಮಃ ಪ್ರಣವಶೋಭಿತಂ ನವಕಷಾಯ ಖಂಡಾಂಬರಂ
ತ್ರಿದಂಡ ಪರಿಮಂಡಿತಂ ತ್ರಿವಿಧ ತತ್ತ್ವ ನಿರ್ವಾಹಕಂ ।
ದಯಾಂಚಿತ ದೃಗಂಚಲಂ ದಳಿತವಾದಿವಾಗ್ವೈಭವಂ
ಶಮಾದಿಗುಣಸಾಗರಂ ಶರಣಮೇಮಿರಾಮಾನುಜಂ ॥

ಶ್ರೀರಂಗರಾಜ ಚರಣಾಂಬುಜ ರಾಜಹಂಸಂ
ಶ್ರೀಮತ್ಪರಾಂಕುಶಪದಾಂಬುಜ ಭೃಂಗರಾಜಂ ।
ಶ್ರೀಭಟ್ಟನಾಥ ಪರಕಾಲ ಮುಖಾಬ್ಜಮಿತ್ರಂ
ಶ್ರೀವತ್ಸ ಚಿಹ್ನಂ ಯತಿರಾಜ ಮೀಡೇ ॥

ಪಾಷಂಡಸಾಗರ ಮಹಾ ಬಡಬಾಮುಖಾಗ್ನಿಃ
ಶ್ರೀರಂಗರಾಜ ಚರಣಾಂಬುಜ ಮೂಲದಾಸಃ ।
ಶ್ರೀವಿಷ್ಣುಲೋಕ ಮಣಿಮಂಟಪ ಮಾರ್ಗದಾಯಿ
ರಾಮಾನುಜೋ ವಿಜಯತೇ ಯತಿರಾಜ ರಾಜಃ ॥

ಕಾಷಾಯ ಶೋಭಿಕಮನೀಯ ಶಿಖಾ ನಿವೇಶಂ
ದಂಡತ್ರಯೋಜ್ವಲಕರಂ ವಿಮಲೋಪವೀತಂ ।
ಉದ್ಯದ್ದಿನೇಶನಿಭಮುಲ್ಲ ಸದೋರ್ಧ್ವ ಪುಂಡ್ರಂ
ರೂಪಂತವಾಸ್ತಿಯತಿರಾಜ ದೃಶೋರ್ಮಮಾಗ್ರೇ ॥

ಏತಾನಿತಾನಿ ಭುವನತ್ರಯ ಪಾವನಾನಿ
ಸಂಸಾರ ರೋಗ ಶಕಲೀ ಕರಣೌಷಧಾನಿ ।
ಜಿಹ್ವಾ ತಲೇ ಮಮಲಿಖಾನಿ ಯಥಾ ಶಿಲಾಯಾಂ
ರಾಮಾನುಜೇತಿ ಚತುರಾಣ್ಯಮೃತಾಕ್ಷರಾಣಿ ॥

(ii) ಶ್ರೀ ರಾಮಾನುಜ ಸುಪ್ರಭಾತಮ್

ಪೂರ್ಣಾರ್ಯ ಪೂರ್ಣಕರುಣಾ ಪರಿಲಬ್ಧಬೋಧ
ವೈರಾಗ್ಯಭಕ್ತಿಮುಖ ದಿವ್ಯ ಗುಣಾಮೃತಾಬ್ಧೇ ।
ಶ್ರೀಯಾಮುನಾರ್ಯಪದ ಪಂಕಜ ರಾಜಹಂಸ
ರಾಮಾನುಜಾರ್ಯಭಗವನ್ ತವ ಸುಪ್ರಭಾತಂ ॥೧॥

ಶ್ರೀರಂಗರಾಜ ಪದ ಪಂಕಜಯೋರಶೇಷಂ
ಕೈಂಕರ್ಯ ಮಾಕಲಯಿತುಂ ಸಕುತೂಹಲಸ್ತ್ವಂ।
ಉತ್ತಿಷ್ಠ ನಿತ್ಯವಿಧಿ ಮಪ್ಯಖಿಲಂ ವಿಧಾತುಂ
ರಾಮಾನುಜಾರ್ಯಭಗವನ್‌ತವ ಸುಪ್ರಭಾತಂ ॥೨॥

ಆಸೇತು ಮಧ್ಯವರದಸ್ಯ ಗಜಾದ್ರಿಭರ್ತುಃ
ಪಾನೀಯ ಮಚ್ಛಮತಿ ಶೀತ ಮಗಾಧಕೂಪಾತ್ ।
ಧ್ವಾಂತಂ ನಿರಸ್ತಮರುಣಸ್ಯ ಕರೈಸ್ಸಮಂತಾತ್
ರಾಮಾನುಜಾರ್ಯಭಗವನ್ ತವ ಸುಪ್ರಭಾತಂ ॥೩॥

ಶ್ರೀ ಮತ್ಕುರಂಗಪುರ ಪೂರ್ಣಮುನಿಸ್ತ್ವದುಕ್ತಂ
ಶ್ರೀಭಾಷ್ಯಶಾಸ್ತ್ರ ಮಮಲಂ ತ್ವಯಿ ಭಕ್ತಿಯುಕ್ತಃ ।
ಶ್ರೋತುಂ ಸಮೀಕ್ಷತಿ ಯತೀಂದ್ರ ಸಿತೋರ್ಧ್ವಪುಂಡ್ರ
ತಂ ಬೋಧಯಾರ್ಥಮಖಿಲಂ ತವ ಸುಪ್ರಭಾತಂ ॥೪॥

ಶ್ರೀಮಾನ್ ಸ್ವಪೂರ್ಣಮಟುರಾದರತಃ ಪ್ರಗೃಹ್ಯ
ಶ್ರೀಪಾದುಕಾಂ ಯತಿ ಪತೇ ಪದಯೋಃ ಪ್ರಯೋಕ್ತುಂ ।
ದ್ವಾರಿಸ್ಥಿತಿಂ ವಿತನುತೇ ಪ್ರಣತಾರ್ತಿಹಾರಿನ್
ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ ॥೫॥

ಪ್ರಾತಃ ಪಠಂತಿ ಪರಮದ್ರವಿಡ ಪ್ರಪನ್ನಾ
ಗಾಯತ್ರಿ ಮಂತ್ರ ಶತಮಷ್ಟ ಶಿರಸ್ಕಮಚ್ಛಂ ।
ಶ್ರೀಶ್ಯೈಲವಾಸವ ಪದಾಬ್ಜನಿವಿಷ್ಟಭಾರಾಃ
ರಾಮಾನುಜಾರ್ಯಭಗವನ್ ತವ ಸುಪ್ರಭಾತಂ ॥೬॥

ಕಾಷಾಯವಸ್ತ್ರ ಕಟಿಸೂತ್ರ ಕಮಂಡಲಂಚ
ಶ್ರೀದಂತ ಕಾಷ್ಠಮಪಿ ದೇಶಿಕ ಸಾರ್ವಭೌಮಾಃ ।
ಪಾಣೌನಿಧಾಯ ನಿವಸಂತಿವಿಶುದ್ಧಗಾತ್ರಾ
ರಾಮಾನುಜಾರ್ಯ ಭಗವನ್ ತವಸುಪ್ರಭಾತಂ ॥೭॥

ತ್ವಾಂ ಬೋಧಯಂತಿ ಗುರವಃ ಪ್ರಥಿತಾ ಮಹಾಂತಃ
ಶ್ರೀವೈಷ್ಣವಾಶ್ಚಯಮಿನ ಸ್ತವಪಾದಭಕ್ತಾಃ ।
ಏಕಾಂತಿ ನಶ್ಚ ವಿಮಲಾಸ್ತ್ವದನನ್ಯ ಭಾವಾಃ
ತಾನ್ ಪಾಲಯಾದ್ಯ ಯತಿ ಶೇಖರ ಸುಪ್ರಭಾತಂ ॥೮॥

ಬ್ರಾಹ್ಮೇ ಪ್ರಬುಧ್ಯ ವಿಬುಧಾ ಸ್ವಗುರುಂ ಪ್ರಣಮ್ಯ
ರಾಮಾನುಜಾಯ ನಮ ಇತ್ಯಸಕೃತ್‌ಬ್ರುವಾಣಾಃ ।
ಅಷ್ಟಾಕ್ಷರಂ ಸಚರಮದ್ವಯಮುಚ್ಚರಂತಿ
ರಾಮಾನುಜಾರ್ಯಭಗವನ್ ತವ ಸುಪ್ರಭಾತಂ ॥೯॥

ಸಂಸೇವ್ಯ ಸಪ್ತಶತ ಸಂಯಮಿ ಸಾರ್ವ ಭೌಮ್ಯೈಃ
ಸದ್ದೇಶಿಕೈಸ್ಸಕಲಶಾಸ್ತ್ರ ವಿದಾಂ ವರಿಷ್ಠೈಃ ।
ಏಕಾಂತಿಭಿಃ ಪರಮಭಾಗವತೈರ್ನಿಷೇವ್ಯ
ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ ॥೧೦॥

ಆರಾಧನಂ ರಚಯಿತುಂ ಕಮಲಾಸವಿಸ್ಯ
ಶ್ರೀಯಾದವಾಚಲಪತೇ ವಿವಿಧೋಪಚಾರೈಃ ।
ಪಾತುಂಚ ದೃಷ್ಟಿಕಮಲೇನನತಾನ ಶೇಷಾನ್
ರಾಮಾನುಜಾರ್ಯಭಗವಾನ್ ತವ ಸುಪ್ರಭಾತಂ ॥೧೧॥

ಗದ್ಯತ್ರಯಂ ನಿಗಮಶೇಖರ ದೀಪಸಾರೌ
ಶ್ರುತ್ಯರ್ಥ ಸಂಗ್ರಹಮಪಿ ಪ್ರಥಿತಂ ಚ ನಿತ್ಯಂ ।
ಗೀತಾರ್ಥಭಾಷ್ಯಮಪಿ ದೇಶಿಕ ಪುಂಗವೇಭ್ಯಃ
ದಾತುಂ ಪ್ರಸೀದ ಯತಿಶೇಖರ ಸುಪ್ರಭಾತಂ ॥೧೨॥

ಶ್ರೀಭಾಷ್ಯ ಮಾಲಿಖಿತು ಮತ್ರ ವಿಶಾಲ ಲೇಖ್ಯೈಃ
ಶ್ರೀವತ್ಸ ಚಿಹ್ನ ಗುರುರಾನತ ದಿವ್ಯ ಗಾತ್ರೈಃ ।

ವೇದಾಂತ ಸೂತ್ರಮಪಿ ವಕ್ತುಮಮುಷ್ಯಸರ್ವಂ
ಉತ್ತಿಷ್ಠ ಲಕ್ಷ್ಮಣ ಮುನೇ ತವ ಸುಪ್ರಭಾತಂ ||೧೩||

ರಾಮಾನುಜಾರ್ಯ ರಮಣೀಯ ಗುಣಾಭಿರಾಮ
ರಾಗಾದಿ ದೂರಗಗುರೋ ಗುರು ಸಾರ್ವಭೌಮ |
ಸತ್ತ್ವ ಪ್ರಧಾನ ಶರಣಾಗತವತ್ಸಲತ್ವತ್
ಪಾದಾಬ್ಜಯೋರಿಹ ಪರತ್ರ ಚ ಕಿಂಕರ ಸ್ಸ್ಯಾಂ ||೧೪||

ಜಯಜಯ ಯತಿ ಸಾರ್ವಭೌಮಾಮಲಸ್ವಾಂತತುಭ್ಯಂನಮೋ
ಜಯಜಯಭವ ಸಿಂಧುಮಗ್ನಾತ್ಮ ಸಂತಾರಕಗ್ರಾಮಿಣೇ |
ಜಯ ಜಯ ಭಜನೀಯ ಕೂರೇಶ ಮುಖ್ಯೈಃ ಪ್ರಸೀದ ಪ್ರಭೋ
ಜಯಜಯ ವಿದುಷಾಂ ನಿಧೇ ಜಾಗೃಹಿ ಶ್ರೀನಿಧೇ ಜಾಗೃಹಿ ||೧೫||

(iii) ರಾಮಾನುಜ ಚತುಶ್ಲೋಕೀ

ಅನಿಶಂಭಜತಾಮನನ್ಯಭಾಜಾಂ ಚರಣಾಂಭೋರುಹ ಮಾಪರೇಣ ಪುಂಸಾಂ |
ವಿತರನ್ನಿಭೃತಂ ವಿಭೂತಿಯುಗ್ಮಂ ಜಯ ರಾಮಾನುಜ ರಂಗಧಾಮ್ನಿ ನಿತ್ಯಂ ||

ಮಲಿನಾನ್ನಿಮತಾನ್ ತ್ವದೀಯ ಸೂಕ್ತಿಃ ಕಲುಷೀಭೂಯ ಕುದೃಷ್ಟಿಭಿಸ್ಸಮೇತಾನ್ |
ಶಕಲೀಕುರುತೇವಿಪಕ್ಷ ವೃತ್ತಾನ್ ಜಯರಾಮಾನುಜ ಶೇಷ ಶೈಲ ಶೃಂಗೇ ||

ಶುತಿಷು ಸ್ಮೃತಿಷು ಪ್ರಮಾಣ ತತ್ತ್ವಂ ಕೃಪಯಾಲೋಚ್ಯವಿಶುದ್ಧಯಾ ಹಿ ಬುದ್ಧ್ಯಾ |
ಅಕರೋಃ ಕಿಲದಿವ್ಯ ಭಾಷ್ಯರತ್ನಂ ಜಯ ರಾಮಾನುಜ ಹಸ್ತಿಧಾಮ್ನಿನಿತ್ಯಂ ||

ಜಯಮಾಯಿ ಮತಾಂಧಕಾರ ಭಾನೋ ಜಯಬಾಹ್ಯ ಪ್ರಮುಖಾಟವೀ ಕೃಶಾನೋ |
ಜಯ ಸಂಶ್ರಿತ ಸಿಂಧು ಶೀತಭಾನೋ ಜಯರಾಮಾನುಜಯಾದವಾದ್ರಿ ಶೃಂಗೇ ||

(iv) ಶ್ರೀಭಾಷ್ಯಕಾರ ಪ್ರಪತ್ತಿಃ

ಶ್ರೀವೈಷ್ಣವಾಗಮ ಪಯೋದಧಿ ಪೂರ್ಣಚಂದ್ರ
ಶ್ರೀಶಾಂಘ್ರಿ ಪದ್ಮ ಮಕರಂದ ರಸಜ್ಞಭೃಂಗ |
ಗೋವಿಂದವರ್ಯಕರ ಸಾರಸ ಪೂಜಿತೌತೇ
ಶ್ರೀಭಾಷ್ಯಕಾರ ಚರಣೌಶರಣಂ ಪ್ರಪದ್ಯೇ ||

ಶ್ರೀಶೈಲಪೂರ್ಣ ಮುಖದೇಶಿಕ ಲಬ್ಧಬೋಧ
ತುರ್ಯಾಶ್ರಮ ಪ್ರಥಿತ ಮೌನಿ ಕುಲಪ್ರದೀಪ |
ಭಟ್ಟಾರ್ಯವರ್ಯ ಕರನೀರಜ ಪೂಜಿತಾತೇ
ಶ್ರೀಭಾಷ್ಯಕಾರ ಚರಣೌಶರಣಂ ಪ್ರಪದ್ಯೇ ||

ಕಾಂಚೀಪುರೀವರದರಾಜ ಕೃಪೈಕ ಪಾತ್ರ
ರಂಗೇಶ ಪೂರ್ಣ ಕರುಣಾ ಪರಿಣಾಮರೂಪ ।
ವೇದಾಂತದೇಶಿಕ ಕರಾಂಬುಜಪೂಜಿತೌತೇ
ಶ್ರೀಭಾಷ್ಯಕಾರ ಚರಣೌಶರಣಂ ಪ್ರಪದ್ಯೇ ॥

ಶ್ರೀಯಾದವಾದ್ರಿ ಪತಿ ಪಾದ ಸರೋಜಹಂಸ
ಶ್ರೀಭೂತಪಟ್ಟಣ ರಮೇಶ ಕಟಾಕ್ಷ ಧನ್ಯ ।
ಶೇಷಾವತಾರ ಕಲಿವೈರಿ ಕರಾರ್ಚಿತೌತೇ
ಶ್ರೀಭಾಷ್ಯಕಾರ ಚರಣೌ ಶರಣಂ ಪ್ರಪದ್ಯೇ ॥

ಶ್ರೀವೇಂಕಟಾಚಲಪತಿ ಪ್ರಿಯ ಲಕ್ಷ್ಮಣಾರ್ಯ
ಸರ್ವಜ್ಞ ಭವ್ಯಯತಿಶೇಖರ ಸಾರ್ವಭೌಮ ।
ವೀಕ್ಷಾವನೇಶ ಹಿತಕೃಷ್ಣ ವನಾರ್ಚಿತೌತೇ
ಶ್ರೀಭಾಷ್ಯಕಾರಚರಣೌ ಶರಣಂ ಪ್ರಪದ್ಯೇ ॥

ತ್ರಯ್ಯಂತ ದೇಶಿಕಪತೇ ವಕುಳಾಭಿರಾಮ
ಪಾದಾರವಿಂದ ರಸ ಸಾರಸ ಸಾರನಾಕ್ಷ ।
ಶ್ರೀಮಚ್ಛಠಾರಿ ಮುನಿವಲ್ಲಭ ಪೂಜಿತೌತೇ
ಶ್ರೀಭಾಷ್ಯಕಾರ ಚರಣೌ ಶರಣಂ ಪ್ರಪದ್ಯೇ ॥

ಕಾಷಾಯರಮ್ಯ ಕಮನೀಯ ಶಿಖೋಪವೀತ
ದಂಡತ್ರಯೋಜ್ವಲ ಕರೋಲ್ಲಸಿ ತೋರ್ಧ್ವ ಪುಂಡ್ರ ।
ಉದ್ಯದ್ದಿನೇಶರುಚಿ ಶೋಭಿತ ಪಾಹಿಮಾಂತೇ
ಶ್ರೀಭಾಷ್ಯಕಾರ ಚರಣೌ ಶರಣಂ ಪ್ರಪದ್ಯೇ ॥

(೪) ಶ್ರೀ ರಾಮಾನುಜ ಕರಾವಲಂಬ ಸ್ತೋತ್ರಂ

ಶ್ರೀರಂಗಶಾಯಿ ಗುಣನಾಮ ಸುಧಾ ರಸಜ್ಞ
ಶ್ರೀವೆಂಕಟೇಶ ಪದ ಪಂಕಜ ಸಕ್ತಚಿತ್ತ ।
ಶ್ರೀದೇವರಾಜ ಕರುಣಾಮೃತ ಸಿಂಧುಚಂದ್ರ
ರಾಮಾನುಜಾರ್ಯ ಮಮದೇಹಿ ಕರಾವಲಂಬಂ ॥

ಸಂಪತ್ಕುಮಾರ ಪದಸಾರಸ ಚಂಚರೀಕ
ಶ್ರೀಮಚ್ಛಠಾರಿ ಮುಖ ಭಕ್ತಮನೋನುರಾಗ ।
ನಾಥಾರ್ಯ ಯಾಮುನ ಮಹಾಗುರು ಪಾದ ಭಕ್ತ
ರಾಮಾನುಜಾರ್ಯ ಮಮದೇಹಿ ಕರಾವಲಂಬಂ ॥

ಶ್ರುತ್ಯಗ್ರಸಾರ ಪದ ಸಂಗ್ರಹ ಮಾರ್ಗವರ್ತಿನ್
ಸ್ಮೃತ್ಯರ್ಥದಾಯಕ ಯತೀಶ್ವರ ಲಕ್ಷ್ಮಣಾರ್ಯ ।
ಶ್ರೀಭೂತದಿವ್ಯ ನಗರೀ ಸತತಾಭಿವಾಸ
ರಾಮಾನುಜಾರ್ಯ ಮಮದೇಹಿ ಕರಾವಲಂಬಂ ॥

ಅಜ್ಞಾತ ಗಾಢ ತಿಮಿರಾಪಹ ಸೂರ್ಯಮೂರ್ತೇ
ಲೋಭಾಭಿಲಾಷಣ ಸುಖಾದಿ ಭುಜಂಗ ತಾರ್ಕ್ಷ್ಯ ।
ಸುಜ್ಞಾನದೀಪ  ಜಗದುಜ್ವಲ ಭಕ್ತಪಾಲ
ರಾಮಾನುಜಾರ್ಯ ಮಮದೇಹಿ ಕರಾವಲಂಬಂ ॥

(vi) ಶ್ರೀ ರಾಮಾನುಜ ಪ್ರಪತ್ತಿ

ಶ್ರೀಭಾಷ್ಯಕಾರ ಭಗವನ್ ಯತಿ ಸಾರ್ವಭೌಮ
ಶ್ರೀಭೂತದಿವ್ಯನಗರೀ ಕೃತ ನಿತ್ಯವಾಸ ।
ಶ್ರೀದೇವರಾಜ ಕರುಣಾಂಬುರುಹಾಂತರಂಗ
ರಾಮಾನುಜಾರ್ಯ ಚರಣೌ ಶರಣಂ ಪ್ರಪದ್ಯೇ ॥

ಗೋಷ್ಠಿಪುರೇಶಘನ ಪೂರ್ಣದ್ಯತಾಪ್ರಪೂರ್ಣ
ಮಾಲಾಧರಾರ್ಯ ವರಯಾಮುನ ದೇಶಿಕಾಂಘ್ರೌ ।
ನ್ಯಸ್ತಾಖಿಲಾತ್ಮ ಭರಣಾತುಲ ವೈಭವೌತೇ
ರಾಮಾನುಜಾರ್ಯಚರಣೌ ಶರಣಂ ಪ್ರಪದ್ಯೇ ॥

ಕಾಸಾರ ಭೂತ ಮಹದಾಹ್ವಯ ಭಟ್ಟನಾಥ
ದಿವ್ಯ ಪ್ರಬಂಧ ನಿಗಮಾಮೃತ ಪಾನ ಹೃಷ್ಟ ।
ಶ್ರೀಭಕ್ತಿಸಾರ ಕುಲಶೇಖರ ಸೂಕ್ತಿ ಪುಷ್ಟ
ರಾಮಾನುಜಾರ್ಯ ಚರಣೌ ಶರಣಂ ಪ್ರಪದ್ಯೇ ॥

ಯೋಗೀಂದ್ರವಾಹ ಹರಿಭಕ್ತ ಪದಾಬ್ಜರೇಣು
ಗೋದಾಕೃತದ್ರಮಿಡ ವೇದ ನಿವಿಷ್ಟಚಿತ್ತ ।
ಸಾರಜ್ಞಸನ್ಮಧುರ ಪೂರ್ವಕ ಸೂರಿಸೂಕ್ತೇ
ರಾಮಾನುಜಾರ್ಯಚರಣೌ ಶರಣಂ ಪ್ರಪದ್ಯೇ ॥

ಶ್ರೀಮನ್ನಪಾರ ವಕುಳಾ ಭರಣೋಕ್ತಿಜಾಲ
ಸಾರಾರ್ಥಬೋಧನ ನಿರಂತರಲಬ್ಧದೀಕ್ಷ ।
ಶ್ರೀಭೂತದಿವ್ಯನಗರೀ ಜನ ಪಾರಿಜಾತ
ರಾಮಾನುಜಾರ್ಯ ಚರಣೌಶರಣಂ ಪ್ರಪದ್ಯೇ ॥

ಸಂಸಾರ ಸಾಗರ ಸಮುತ್ತರಣೈಕ ಪೋತೌ
ಸಂಸೇವಿತೌ ವಿಮಲ ಸಂಯಮಿ ಸಪ್ತಶತ್ಯಾ ।
ಸಂಫುಲ್ಲ ಕೋಕನದ ಕೋಮಲ ಪಲ್ಲವಾಭೌ
ರಾಮಾನುಜಾರ್ಯ ಚರಣೌ ಶರಣಂ ಪ್ರಪದ್ಯೇ ॥

ಶ್ರೀರಂಗವೇಂಕಟಗಜಾಚಲಯಾದವಾದ್ರಿ
ನಾಥಾಂಘ್ರಿಪಂಕಜ ಸಮುಜ್ವಲರಾಜಹಂಸ ।
ರಮ್ಯೋಪವೀತ ವಿಲಸದ್ಭುಜ ಮಧ್ಯಭಾಗ
ರಾಮಾನುಜಾರ್ಯ ಚರಣೌ ಶರಣಂ ಪ್ರಪದ್ಯೇ ॥

ಯೌತೇ ಯತೀಂದ್ರ ಗುರುವತ್ಸ ಕಲಾನ್ಸ್ವಸತ್ತಾ
ಸದ್ಭೈವಹಂತಿ ಶಿರಸಾಜಿತ ಬಾಹ್ಯ ಸಂಘೌ ।
ಶ್ರೀಕೂರನಾಥ ಗುರು ದಾಶರಥಿ ಪ್ರಧಾನೌ
ರಾಮಾನುಜಾರ್ಯ ಚರಣೌ ಶರಣಂ ಪ್ರಪದ್ಯೇ ॥

ಶುದ್ಧಾಸುಧಾಂಶು ರುಚಿತಾಭವದೀಯ ಚಿತ್ತ
ಬುದ್ಧಾವಿರಕ್ತ ಜನಮಾನಸ ಪದ್ಮಹಂಸೌ ।
ಹೃಷ್ಟಾ ಹೃತಾಶ್ರಿತ ಸಮಸ್ತ ವಿರೋಧಿ ಸಂಘಾ
ರಾಮಾನುಜಾರ್ಯ ಚರಣಾ ಶರಣಂ ಪ್ರಪದ್ಯೇ ॥

ಸೌಮ್ಯೋಪಯಂತ್ರ ಮುನಿವಾದ ಸರೋಜ ಭೃಂಗ
ವಾದೀಂದ್ರ ಷಂಡ ಭಯಕೃತ್ ಪ್ರಿಯಪದ್ಮ ಭಾಸೌ ।
ಕಾಂತಾಪಗೌ ಕುಲಧನೇ ಮಮ ಸಂಯಮೀಂದ್ರ
ರಾಮಾನುಜಾರ್ಯ ಚರಣೌ ಶರಣಂ ಪ್ರಪದ್ಯೇ ॥

## (vii) ಭಜಯತಿರಾಜ ಸ್ತೋತ್ರಂ

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ ॥
(ಇದನ್ನು ಪ್ರತಿಯೊಂದೂ ಶ್ಲೋಕದ ಕೊನೆಯಲ್ಲಿ ಅನುಸಂಧಾನ ಮಾಡಬೇಕು)

ಶ್ರೀರಂಗೇಶಜಯಾಶ್ರಯಕೇತುಃ ಶ್ರಿತಜನ ಸಂರಕ್ಷಣ ಜೀವಾತುಃ ।
ಭವಭಯಜಲಧೇರೇಷಹಿಸೇತುಃ ಪದ್ಮಾಸೇತುಃ ಪ್ರಣತೌಹೇತುಃ ॥೧॥

ಆದೌ ಜಗದಾಧಾರಶ್ಶೇಷಃ ತದನು ಸುಮಿತ್ರಾನಂದನವೇಷಃ ।
ತದುಪರಿಧೃತಹಲ ಮುಸಲ ವಿಶೇಷಃ ತದನಂತರ ಮಭವದ್ಗುರುರೇಷಃ ॥೨॥

ಭುಂಕ್ತೇ ವೈಷಯಿಕಂ ಸುಖಮನ್ಯಃ ಪ್ರಚಕಾಸ್ತ್ಯೇವಾನಶ್ನನ್ನನ್ಯಃ ।
ಇತಿಯಸ್ತತ್ತ್ವಂ ಪ್ರಾಹವದಾನ್ಯಃ ತಸ್ಮಾದಧಿಕಃ ಕೋನುವದಾನ್ಯಃ ॥೩॥

ನಷ್ಟೇನಯನೇ ಕಸ್ಯಾಲೋಕಃ ಚಿತ್ತೇಮತ್ತೇಕಸ್ಯ ವಿವೇಕಃ |
ಕ್ಷೀಣೇಪುಣ್ಯೇಕಸ್ಸುರಲೋಕಃ ಕಾಮೇಧೂತೇಕಸ್ತವ ಶೋಕಃ ||೪||

ನಿಶಿವನಿತಾಸುಖನಿದ್ರಾಲೋಲಃ ಪ್ರಾತಃ ಪರದೂಷಣಪಟುಶೀಲಃ |
ಅಂತರ್ಯಾಮಿ ನಿಜಾಯುಃ ಕಾಲಃ ಕಿಂಜಾನಾತಿ ನರಃ ಪಶುಲೀಲಃ ||೫||

ಕೇಚಿಲ್ಲೀಲಾಲಾಲಸಗತಯಃ | ಕೇಚಿದ್ಬಾಲಾಲಾಲಸಮತಯಃ |
ಕೇಚಿಡ್ಡೋಲಾಯಿತಹತಮತಯಃ ಕೇಪಿನಸಂತ್ಯರ್ಚಿತಯತಿಪತಯಃ ||೬||

ಯಾವಾನಬಲೋಜರಯಾದೇಹಃ ತಾವಾನ್ಪ್ರಬಲೋ ವಿಷಯೇ ಮೋಹಃ
ವಚಸಿ ವಿರಕ್ತಿಶ್ರ್ಯುತಿಪರಿವಾಹಃ ಮನಸಿಹಿತಸ್ತ್ವ ಪರೋಪಿ ವಿವಾಹಃ ||೭||

ಕಲುಷನಿಕಾಯಂ ಲಲನಾಕಾಯಂ ಪಶ್ಯನ್ಮ್ಯಹ್ಯಸಿ ಸಾಯಂಸಾಯಮ್ |
ಜಹಿ ಜಹಿ ಹೇಯಂ ತದ್ವ್ಯವಸಾಯಂ ಭಜನಿರಪಾಯಂ ಚರಮೋಪಾಯಮ್ ||೮||

ರಾತ್ರಿಂದಿವಮಪಿಭಿಕ್ಷಾಚರ್ಯಾ ಕಲಹಾಯ್ಯೆವಾ ಗಚ್ಛತಿಭಾರ್ಯಾ |
ಮಧ್ಯೇಬಾಂಧವ ಸೇವಾಕಾರ್ಯ ಕಥಯಕದಾತವದೇವಸಪರ್ಯಾ ||೯||

ಅಂಧಂ ನಯನಂ ಭೂಮೌಶಯನಂ ಮಂದಂ ವಚನಂ ಮಲಿನಂ ವದನಮ್ |
ತಸ್ಮಿನ್ ಕಾಲೇಗೋಪ್ಯಂ ಸದನಂ ವಾಂಛಸಿದತ್ತ ತನೂಜಾನಯನಮ್ ||೧೦||

ಕಾಲಚ್ಛದಕೃತಕುಬ್ಜಕುಟೀರಃ ಸಾಯಂ ಸಂಧ್ಯಾ ಕಬಳಾಹಾರಃ |
ವಿವಿಧ ಪಟಚ್ಚರದಾರಃ ಕ್ರೂರಃ ಕೋಪಿವಿರಿಂಚಿ ಸಮಾಹಂಕಾರಃ ||೧೧||

ಮಂತ್ರದ್ರವ್ಯವಿಶುದ್ಧೋಯಾಗಃ ಸರ್ವಾರಂಭವಿರಾಗಸ್ತ್ಯಾಗಃ |
ಕರ್ತುಂ ಶಕ್ಯೋನಕಲೌಯೋಗಃ ಕಿಂತುಯತೀಶ ಗುಣಾಮೃತಭೋಗಃ || ೧೨||

ಉಪರಿಮಹೋಪಲ ವರ್ಷಾಸಾರಃ ಮಾರ್ಗೇ ಕಂಟಕ ಕರ್ದಮಪೂರಃ |
ಕಕ್ಷೇಭಾರಶ್ಶಿರಸಿಕಿಶೋರಃ ಸುಖಯತಿ ಘೋರಃ ಕಃ ಸಂಸಾರಃ ||೧೩||

ಭಜಸಿವೃಥಾ ವಿಷಯೇಷು ದುರಾಶಾಂ ವಿವಿಧ ವಿಚಿತ್ರ ಮನೋರಥಕೋಶಾಮ್ |
ಕಿಯದಪಿಲಭಸೇ ನಹಿತತ್ರೈಕಂ ಕಿಂತುವ್ರಜಸಿ ಮಹಾಂತಂ ಶೋಕಮ್ ||೧೪||

ಕಶ್ಚನಲೋಕೇ ಕರಪುಟಪಾತ್ರಃ ಪಾತುಂ ಸುತಮಾಶ್ರಿತ ಮಠಸತ್ರಃ |
ತಸ್ಮಿನ್ ವೃದ್ಧೇಸತಿಸಕಲತ್ರಃ ಶಪತಿಹಿರಂಡಾಸುತ ಇತಿಪುತ್ರಃ ||೧೫||

ಮನುಜಪತಿಂವಾಧಿಗಧಿಪತಿಂವಾ ಜಲಜಭವಂವಾ ಜಗದಧಿಪಂವಾ |
ಮಮತಾಹಂಕೃತಿಮಲಿನೋಲೋಕಃ ನಿಂದತಿನಿಂದತಿ ನಿಂದತ್ಯೇವ ||೧೬||

ಪಾಪಹತೋವಾಪುಣ್ಯಯುತೋವಾ ಸುರನರತಿರ್ಯಕ್ ಜಾತಿಗತೋವಾ ||
ರಾಮಾನುಜಪದತೀರ್ಥಾನ್ ಮುಕ್ತಿಂ ವಿಂದತಿ ವಿಂದತಿ ವಿಂದತ್ಯೇವ ||೧೭||

ಗುಣಗುಣಿನೋರ್ಭೇದಃ ಕಿಲನಿತ್ಯಃ ಚಿದಚಿದ್ದ್ವಯ ಪರಭೇದಸ್ಸತ್ಯಃ |
ತದ್ದ್ವಯದೇಹೋ ಹರಿರಿತಿ ತತ್ತ್ವಂ ಪಶ್ಯವಿಶಿಷ್ಟಾದ್ವೈತಂ ತತ್ತ್ವಮ್ ||೧೮||

ಯತಿಪತಿಪದಜಲಕಣಿಕಾಸೇಕಃ ಚತುರಕ್ಷರಪದಯುಗ್ಮವಿವೇಕಃ |
ಯಸ್ಯತುಸಾಲಸಗರ್ಯವಲೋಕಃ ತಸ್ಯಪದೇನ ಹತೋ ಯಮಲೋಕಃ ||೧೯||

ಚಿಂತಯಸರ್ವಂ ಚಿದಚಿದ್ರೂಪಂ ತನುರಿತಿತಸ್ಯ ಹರೇರನುರೂಪಮ್ |
ತಸ್ಮಾತ್ ಕಸ್ಮಿತ್ ಕಲಯಸಿಕೋಪಂ ಪಶ್ಚಾತ್ ಭಜಸಿದುರಾಪಂ ತಾಪಮ್ ||೨೦||

ಯಶ್ಚತುರಕ್ಷರಮಂತ್ರ ರಹಸ್ಯಂ ವೇದ ತಮೇವ ವೃಣೀಹಿ ಸದಸ್ಯಮ್ |
ತಚ್ಚರಣದ್ವಯದಾಸ್ಯ ಮುಪಾಸ್ಯಂ ತದ್ವಿಪರೀತಂ ಮತಮಪಹಾಸ್ಯಮ್ ||೨೧||

ವೈಷ್ಣವಕುಲಗುಣದೂಷಣಚಿಂತಾಂ ಮಾಕುರುನಿಜಕುಲಶೀಲಾಹಂತಾಮ್ |
ಯತಿಪತಿರೇವಹಿ ಗುರುರೇತೇಷಾಂ ಇತಿಜಾನೀಹಿ ಮಹತ್ತ್ವಂ ತೇಷಾಮ್ ||೨೨||

ವಿದ್ಯಾನಿಪುಣಾವಯಮಿತ್ಯನ್ಯೇ ಹೃದ್ಯಾಧನಿನೋವಯಮಿತ್ಯನ್ಯೇ |
ಸತ್ಕುಲಜಾತಾ ವಯಮಿತ್ಯನ್ಯೇ ತೇಷುಕಲಿಂ ಪರಿಪೂರ್ಣಂಮನ್ಯೇ ||೨೩||

ಯಮಕಿಂಕರಕರಶೂಲೇಲೋಲೇ ಪತದಭಿಘಾತವಿಘಾಲೇ ಘಾಲೇ |
ದಹತಿತನುಂ ಪ್ರತಿಕೂಲೇ ಕಾಲೇ ಕಂ ರಮಯಸಿ ತತ್ಕಾಲೇ ಬಾಲೇ ||೨೪||

ಸುಮುಸುಕುಮಾರಂ ಶೋಭಿತಮಾರಂ ರತಿಸುಖಸಾರಂ ಯುವತಿ ಶರೀರಮ್ |
ಗತಜೀವಿತಮತಿಘೋರವಿಕಾರಂ ದೃಷ್ಟ್ವಾ ಗಚ್ಛಸಿದೂರಂ ದೂರಮ್ ||೨೫||

ನರವಾಹನಗಜತುರಗಾರೂಢಾಃ ನಾರೀಸುತ ಪೋಷಣಗುಣಗೂಢಾಃ |
ನಾನಾರಂಜಕ ವಿದ್ಯಾಪ್ರೌಢಾಃ ನಾಗರಿಕಾಃ ಕಿಂ ಯತಯೋ ಮೂಢಾಃ ||೨೬||

ಯಸ್ಯಮುಖಸ್ಥಾಯತಿಪತಿಸೂಕ್ತಿಃ ತಸ್ಯಕರಸ್ಥಾವಿಲಸತಿಮುಕ್ತಿಃ |
ನರಕೇಪತಿತಂ ನವನವಯುಕ್ತಿಃ ನಹಿರಕ್ಷತಿ ಸಾಮಾನ್ಯ ನಿರುಕ್ತಿಃ ||೨೭||

ಶ್ರುತಿ ಶಿರಸಾಮತ್ಯಂತವಿದೂಷ್ಯಂ ಸೂತ್ರಾನಭಿಮತಮತಿವೈದೂಷ್ಯಮ್ |
ಪ್ರಥಮಮಮಂಗಳಮಸೃತವಿಶೇಷ್ಯಂ ಪ್ರಲಪಸಿಕಿಂಪ್ರಾಕೃತಕೃತಭಾಷ್ಯಮ್ ||೨೮||

ತಸ್ಕರಜಾರವಿದೂಷಣಧೂರ್ತಾಃ ಮಸ್ಕರಿಮೌನಿ ದಿಗಂಬರವೃತ್ತಾಃ |
ಗುಪ್ತಸತೀಸುತ ಧನಮದಮತ್ತಾಃ ಗುರವಃ ಕಿಂ ಪರವಂಚಕ ಚಿತ್ತಾಃ ||೨೯||

ಕಾಂತಿಮತೀಸುಕುಮಾರ ಕುಮಾರಂ ಕೇಶವಸಿಂಹ ಕಿಶೋರಮುದಾರಮ್ |
ರಾಮಾನುಜಮಹಿರಾಡವತಾರಂ ಮೂಕಾಂಧಾನಪಿಮೋಕ್ಷಯಿತಾರಮ್ ||೩೦||

ಕಾಷಾಯಾಂಬರ ಕವಚಿತಗಾತ್ರಂ ಕಲಿತ ಕಮಂಡಲುದಂಡ ಪವಿತ್ರಮ್ |
ವಿಧೃತ ಶಿಖಾಹರಿಣಾಜಿನಸೂತ್ರಂ ವ್ಯಾಖ್ಯಾತದ್ವೈಪಾಯನ ಸೂತ್ರಮ್ ||೩೧||

ಯಾಮುನಪೂರ್ಣ ಕೃಪೋಜ್ವಲಗಾತ್ರಂ ರಾಮಾಬ್ಜಾಕ್ಷ ಮುನೀಕ್ಷಣ ಪಾತ್ರಮ್ ।
ಕೋಮಲಶರರಿಪು ಪದಯುಗ ಮಾತ್ರಂ ಶ್ರೀ ಮಾಧವ ಸೇನಾಪತಿ ಮಿತ್ರಮ್ ॥೩೨॥

ಸಾಲಗ್ರಾಮೇಸರ್ವಹಿತಾರ್ಥಂ ಯೇನಾಸ್ಥಾಪಿಗುರೋಃ ಪದತೀರ್ಥಮ್ ।
ತತ್ಕುಲದೈವತಮಿಹ ಪುರುಷಾರ್ಥಂ ಸಕಲೋಪಾಯಾಧಿಕ ಪರಮಾರ್ಥಮ್ ॥೩೩॥

ಪ್ರವಚನಶಕ್ತಃ ಪ್ರಜ್ಞಾಯುಕ್ತಃ ಪರಹಿತಸಕ್ತಃ ಪರಮವಿರಕ್ತಃ ।
ನಾನಾ ದೈವತ ಭಕ್ತೋಪ್ಯುಕ್ತಃ ನಭವತಿ ಮುಕ್ತೋ ನಭವತಿಮುಕ್ತಃ ॥೩೪॥

ಸಂತ್ಯಜಸಕಲಮುಪಾಯಾ ಚರಣಂ ವ್ರಜರಾಮಾನುಜ ಚರಣೌ ಶರಣಮ್ ।
ಪಶ್ಯಸಿತಮಸಃ ಪಾರಂ ನಿತ್ಯಂ ಸತ್ಯಂ ಸತ್ಯಂ ಪುನರಪಿ ಸತ್ಯಮ್ ॥೩೫॥

ಭಗವದ್ರಾಮಾನುಜಷಡ್ವಿಂಶಃ ಸಾಲಗ್ರಾಮಗುರೂತ್ತಮ ವಂಶ್ಯಃ ।
ಕೌಂಡಿನ್ಯಃ ಕವಿರಾಹ ಪವಿತ್ರಂ ರಂಗಾರ್ಯೋಯತಿರಾಜ ಸ್ತೋತ್ರಮ್ ॥೩೬॥

## (viii) ರಾಮಾನುಜ ಅಷ್ಟೋತ್ತರಶತನಾಮ ಸ್ತೋತ್ರಂ

ರಾಮಾನುಜೋ ಪುಷ್ಕರಾಕ್ಷೋಯತೀಂದ್ರಃ ಕರುಣಾಕರಃ ।
ಕಾಂತಿಮತ್ಯಾತ್ಮಜಃ ಶ್ರೀಮಾನ್ ಲೀಲಾಮಾನುಷ ವಿಗ್ರಹಃ ॥೧॥

ಸರ್ವಶಾಸ್ತ್ರಾರ್ಥತತ್ತ್ವಜ್ಞಃ ಸರ್ವಜ್ಞಸ್ಸಜ್ಜನಪ್ರಿಯಃ ।
ನಾರಾಯಣ ಕೃಪಾಪಾತ್ರಃ ಶ್ರೀಭೂತಪುರನಾಯಕಃ ॥೨॥

ಅನಘೋ ಭಕ್ತಮಂದಾರಃ ಕೇಶವಾನಂದವರ್ಧನಃ ।
ಕಾಂಚೀಪೂರ್ಣ ಪ್ರಿಯಸಖಃ ಪ್ರಣತಾರ್ತಿ ವಿನಾಶನಃ ॥೩॥

ಪುಣ್ಯ ಸಂಕೀರ್ತನಃ ಪುಣ್ಯಃ ಬ್ರಹ್ಮರಾಕ್ಷಸಮೋಚಕಃ ।
ಯಾದವಾಪಾದಿತಾಪಾರ್ಥ ವೃಕ್ಷಚ್ಛೇದ ಕುಠಾರಕಃ ॥೪॥

ಅಮೋಘೋ ಲಕ್ಷ್ಮಣಮುನಿಃ ಶಾರದಾ ಶೋಕನಾಶಕಃ ।
ನಿರಂತರ ಜನಾಜ್ಞಾನ ನಿರ್ಮೋಚನ ವಿಚಕ್ಷಣಃ ॥೫॥

ವೇದಾಂತದ್ವಯ ಸಾರಜ್ಞಃ ವರದಾಂಬುಪ್ರದಾಯಕಃ ।
ಪರಾಭಿಪ್ರಾಯ ತತ್ತ್ವಜ್ಞೋ ಯಾಮುನಾಂಗುಳಿ ಮೋಚಕಃ ॥೬॥

ದೇವರಾಜ ಕೃಪಾಲಬ್ಧ ಷಡ್ವಾಕ್ಯಾರ್ಥ ಮಹೋದಧಿಃ ।
ಪೂರ್ಣಾರ್ಯ ಲಬ್ಧ ಸನ್ಮಂತ್ರಃ ಶೌರಿಪಾದಾಬ್ಜಷಟ್ಪದಃ ॥೭॥

ತ್ರಿದಂಡ ಧಾರೀ ಬ್ರಹ್ಮಜ್ಞೋ ಬ್ರಹ್ಮಧ್ಯಾನ ಪರಾಯಣಃ ।
ರಂಗೇಶ ಕೈಂಕರ್ಯರತೋ ವಿಭೂತಿದ್ವಯನಾಯಕಃ ॥೮॥

ಗೋಷ್ಠೀಪೂರ್ಣ ಕೃಪಾಲಬ್ಧ ಮಂತ್ರರಾಜ ಪ್ರಕಾಶಕಃ ।
ವರರಂಗಾನುಕಂಪಾತ್ತ ದ್ರಾವಿಡಾಮ್ನಾಯ ಪಾರಗಃ ॥೯॥

ಮಾಲಾಧರಾರ್ಯಸುಜ್ಞಾತ ದ್ರಾವಿಡಾಮ್ನಾಯ ತತ್ತ್ವಧೀಃ ।
ಚತುಸ್ಸಪ್ತತಿಶಿಷ್ಯಾಢ್ಯಃ ಪಂಚಾಚಾರ್ಯ ಪದಾಶ್ರಯಃ ॥೧೦॥

ಪ್ರಪೀತ್ತಿ ವಿಷತೀರ್ಥಾಂಭಃ ಪ್ರಕಟೀಕೃತ ವೈಭವಃ ।
ಪ್ರಣತಾರ್ತಿಹರಾಚಾರ್ಯ ದತ್ತ ಭಿಕ್ಷೈಕ ಭೋಜನಃ ॥೧೧॥

ಪವಿತ್ರೀಕೃತ ಕೂರೇಶೋ ಭಾಗಿನೇಯಸ್ತ್ರಿದಂಡಕಃ ।
ಕೂರೇಶ ದಾಶರಥ್ಯಾದಿ ಚರಮಾರ್ಥ ಪ್ರದಾಯಕಃ ॥ ೧೨॥

ರಂಗೇಶ ವೆಂಕಟೇಶಾದ್ರಿ ಪ್ರಕಟೀಕೃತ ವೈಭವಃ ।
ದೇವರಾಜಾರ್ಚನರತೋ ಮೂಕಮುಕ್ತಿಪ್ರದಾಯಕಃ ॥೧೩॥

ಯಜ್ಞಮೂರ್ತಿ ಪ್ರತಿಷ್ಠಾತಾ ಮನ್ನಾಥೋ ಧರಣೀಧರಃ ।
ವರದಾಚಾರ್ಯ ಸದ್ಭಕ್ತೋ ಯಜ್ಞೇಶಾರ್ತಿ ವಿನಾಶಕಃ ॥೧೪॥

ಅನಂತಾಭೀಷ್ಟ ಫಲದೋ ವಿಠಲೇಂದ್ರ ಪ್ರಪೂಜಿತಃ ।
ಶ್ರೀಶೈಲಪೂರ್ಣ ಕರುಣಾ ಲಬ್ಧ ರಾಮಾಯಣಾರ್ಥಕಃ ॥೧೫॥

ಪ್ರಪತ್ತಿ ಧರ್ಮೈಕರತೋ ಗೋವಿಂದಾರ್ಯ ಪ್ರಿಯಾನುಜಃ ।
ವ್ಯಾಸಸೂತ್ರಾರ್ಥ ತತ್ತ್ವಜ್ಞೋ ಬೋಧಾಯನ ಮತಾನುಗಃ ॥೧೬॥

ಶ್ರೀಭಾಷ್ಯಾದಿ ಮಹಾಗ್ರಂಥಕಾರಕಃ ಕಲಿನಾಶನಃ ।
ಅದ್ವೈತ ಮತವಿಚ್ಛೇತ್ತಾ ವಿಶಿಷ್ಟಾದ್ವೈತ ಪಾರಗಃ ॥೧೭॥

ಕುರಂಗ ನಗರೀ ಪೂರ್ಣಮಂತ್ರ ರತ್ನೋಪದೇಶಕಃ ।
ವಿನಾಶಿತಾಖಿಲಮತಃ ಶೇಷೀಕೃತ ರಮಾಪತಿಃ ॥೧೮॥

ಪುತ್ರೀಕೃತ ಶಠಾರಾತಿಃ ಶಠಜಿತ್ ಋಣಮೋಚಕಃ ।
ಭಾಷಾದತ್ತ ಹಯಗ್ರೀವೋ ಭಾಷ್ಯಕಾರೋಮಹಾಯಶಾಃ ॥೧೯॥

ಪವಿತ್ರೀ ಕೃತ ಭೂಭಾಗಃ ಕೂರ್ಮನಾಥ ಪ್ರಕಾಶಕಃ ।
ಶ್ರೀವೇಂಕಟಾಚಲಾಧೀಶ ಶಂಖ ಚಕ್ರ ಪ್ರದಾಯಕಃ ॥೨೦॥

ಶ್ರೀವೆಂಕಟೇಶಶ್ವಶುರಃ ಶ್ರೀರಮಾ ಸಖ ದೇಶಿಕಃ ।
ಕೃಪಾಮಾತ್ರ ಪ್ರಸನ್ನಾರ್ಯೋ ಗೋಪಿಕಾ ಮೋಕ್ಷದಾಯಕಃ ॥೨೧॥

ಸಮೀಚೀನಾರ್ಯ ಸಚ್ಛಿಷ್ಯಃ ಸತ್ಕೃತೋ ವೈಷ್ಣವ ಪ್ರಿಯಃ ।
ಕ್ರಿಮಿಕಂಠ ನೃಪಧ್ವಂಸೀ ಸರ್ವಮಂತ್ರಮಹೋದಧಿಃ ॥೨೨॥

ಅಂಗೀಕೃತಾಂಧ್ರ ಪೂರ್ಣಾರ್ಯೋ ಸಾಲಗ್ರಾಮ ಪ್ರತಿಷ್ಠಿತಃ ।
ಶ್ರೀಭಕ್ತಗ್ರಾಮ ಪೂರ್ಣೇಶೋ ವಿಷ್ಣುವರ್ಧನ ರಕ್ಷಕಃ ॥೨೩॥

ಜೈನಧ್ವಾಂತ ಸಹಸ್ರಾಂಶು ಶ್ಶೇಷ ರೂಪ ಪ್ರದರ್ಶಕಃ ।
ನಗರೀಕೃತ ವೇದಾದ್ರಿಃ ಡಿಲ್ಲೀಶ್ವರ ಸಮರ್ಚಿತಃ ॥೨೪॥

ನಾರಾಯಣ ಪ್ರತಿಷ್ಠಾತಾ ಸಂಪತ್ಪುತ್ರ ವಿಮೋಚಕಃ ।
ಸಂಪತ್ಕುಮಾರ ಜನಕಃ ಸಾಧುಲೋಕ ಶಿಖಾಮಣಿಃ ॥ ೨೫॥

ಸುಪ್ರತಿಷ್ಠಿತ ಗೋವಿಂದರಾಜಃ ಪೂರ್ಣಮನೋರಥಃ ।
ಗೋದಾಗ್ರಜೋ ದಿಗ್ವಿಜೇತಾ ಗೋದಾಭೀಷ್ಟ ಪ್ರಪೂರಕಃ ॥೨೬॥

ಸರ್ವಸಂಶಯ ವಿಚ್ಛೇತ್ತಾ ವಿಷ್ಣು ಲೋಕ ಪ್ರದಾಯಕಃ ।
ಅವ್ಯಾಹತ ಮಹದ್ವರ್ತ್ಮಾ ಯತಿರಾಜೋ ಜಗದ್ಗುರುಃ ॥೨೭।

(ix) . ಶ್ರೀಭಾಷ್ಯಕಾರ ಮಂಗಳಂ

ಶ್ರೀಪರಾಂಕುಶ ಪಾದಾಬ್ಜ ಸುರಭೀಕೃತಮೌಳಯೇ ।
ಶ್ರೀವತ್ಸ ಚಿಹ್ನನಾಥಾಯ ಯತಿರಾಜಾಯ ಮಂಗಳಂ ॥

ನಾಥ ಪದ್ಮಾಕ್ಷರಾಮಾರ್ಯ ಪಾದಪಂಕಜ ಸೇವಿನೇ ।
ಸೇವ್ಯಾಯ ಸರ್ವಯಮಿನಾಂ ಯತಿರಾಜಾಯ ಮಂಗಳಂ ॥

ಪೂರ್ಣಾಯ ಪೂರ್ಣ ಕರುಣಾ ಪಾತ್ರಾಯಾಮಿತ ತೇಜಸೇ ।
ಮಾಲಾಧರ ಪ್ರಿಯಾಯಾಸ್ತು ಯತಿರಾಜಾಯ ಮಂಗಳಂ ॥

ಸಂಸೇವ್ಯ ಯಾಮುನಾಚಾರ್ಯಮೇಕಲವ್ಯೋಸ್ಮ್ಯಹಂಗುರೋಃ ।
ಅನ್ಯನ್ನೇತಿವದೇನ್ನಿತ್ಯಂ ಯತಿರಾಜಾಯ ಮಂಗಳಂ॥

ಶ್ರೀಕಾಂಚೀಪೂರ್ಣ ಮಿಶ್ರೋಕ್ತರಹಸ್ಯಾರ್ಥವಿದೇಸದಾ ।
ದೇವರಾಜ ಪ್ರಿಯಾಯಾಸ್ತು ಯತಿರಾಜಾಯ ಮಂಗಳಂ ॥

ಶ್ರೀಮದ್ಗೋಷ್ಠೀ ಪುರೀ ಪೂರ್ಣ ದಿವ್ಯಾಜ್ಞಾಕುರ್ವತೇಮುದಾ ।
ಶ್ಲೋಕಾರ್ಥಂ ಕುರ್ವತೇತಸ್ಮೈಯತಿರಾಜಾಯ ಮಂಗಳಂ ॥

ಕೂರೇಶ ಕುರುಕಾನಾಥ ದಾಶರಥ್ಯಾದಿ ದೇಶಿಕಾಃ ।
ಯಚ್ಛಿಷ್ಯಾ ಭಾಂತಿತೇತಸ್ಮೈ ಯತಿರಾಜಾಯ ಮಂಗಳಂ ॥

ಚರಮ ಶ್ಲೋಕ ತತ್ತ್ವಾರ್ಥಂ ಜ್ಞಾತ್ವಾರ್ಯಾಜ್ಞಾಂ ವಿಲಂಘ್ಯಚ ।
ದದತೇತ ಸ್ವಕೀಯೇಭ್ಯೋ ಯತಿರಾಜಾಯ ಮಂಗಳಂ ॥

ಶ್ರೀಶೈಲ ಪೂರ್ಣಕೃಪಯಾ ಶ್ರೀರಾಮಾಯಣಮರ್ಥಕಃ ।
ಭಕ್ತ್ಯಾಯೇನ ಶ್ರುತಂತಸ್ಮೈ ಯತಿರಾಜಾಯ ಮಂಗಳಂ ॥

ಶಂಕರಾದಿ ವಿದೃಷ್ಟೀನಾಂ ಬಾಹ್ಯಾನಾಂ ನಿಧನಾಯಚ ।
ಶ್ರೀಭಾಷ್ಯಂ ಕುರ್ವತೇ ತಸ್ಮೈ ಯತಿರಾಜಾಯ ಮಂಗಳಂ ॥

ಕುರ್ವನ್ನುಪನಿಷದ್ಭಾಷ್ಯಂ ಜಗದ್ರಕ್ಷಾಂ ಕರೋತಿಯಃ ।
ದಯಯಾ ಪರತಂತ್ರಾಯ ಭಾಷ್ಯಕಾರಾಯ ಮಂಗಳಂ ॥

ದ್ರವಿಡೋಪನಿಷದ್ವ್ಯಾಖ್ಯಾಂ ವದೇತಿ ಮದನುಜ್ಞಯಾ ।
ಶಾಸತೇಕುರುಕೇಶಂ ತಂ ಭಾಷ್ಯಕಾರಾಯ ಮಂಗಳಂ ॥

ಗತ್ವಾತು ಶಾರದಾ ಪೀಠಂ ವೃತ್ತಿಂ ಬೋಧಾಯನಸ್ಯಚ ।
ಅವಲೋಕ್ಯಾಗತಾಯಾಸ್ತು ಭಾಷ್ಯಕಾರಾಯ ಮಂಗಳಂ ॥

ಪರಮಾಣು ಮೃಷಾವಾದಿ ವಾದ ಸಂಹಾರ ಕಾರಿಣೇ ।
ತಸ್ಮೈ ಭಗವತೇ ಶ್ರೀಮತ್ ಭಾಷ್ಯಕಾರಾಯ ಮಂಗಳಂ ॥

ಶ್ರೀಮತ್ಕುರಂಗಪೂರ್ಣಾಯ ಶ್ರೀಭಾಷ್ಯಂ ವದತೇಸ್ವಕಂ ।
ಪಿತ್ರೇ ಸಂಪತ್ಸುತಸ್ಯಾಪಿ ಭಾಷ್ಯಕಾರಾಯ ಮಂಗಳಂ ॥

ದತ್ವಾವೃಷಗಿರೀಶಸ್ಯ ಶಂಖ ಚಕ್ರೇರಮಾಪತೇ ।
ಪರಮ ಪ್ರೀತಿಯುಕ್ತಾಯ ಭಾಷ್ಯಕಾರಾಯ ಮಂಗಳಂ ॥

ಸಂನ್ಯಾಸಂ ಕುರ್ವತೇ ಕಾಂಚ್ಯಾಮನಂತ ಸರಸೀತಟೇ ।
ವರದೇಸ್ಯಸ್ತಭಾರಾಯ ಭಾಷ್ಯಕಾರಾಯ ಮಂಗಳಂ ॥

ಶ್ರೀಮನ್ಮಹಾಭೂತಪುರೀ ಶ್ರೀಮತ್ಕೇಶವಯಜ್ವನಃ ।
ಕಾಂತಿಮತ್ಯಾಂ ಪ್ರಸೂತಾಯ ಯತಿರಾಜಾಯ ಮಂಗಳಂ ॥

ಶೇಷೋವಾ ಸೈನ್ಯನಾಥೋವಾ ಶ್ರೀಪತಿರ್ವೇತಿ ಸಾತ್ವಿಕೈಃ ।
ವಿತರ್ಕ್ಯಾಯ ಮಹೋಪ್ರಾಜ್ಞೈರ್ಯತಿರಾಜಾಯ ಮಂಗಳಂ ॥

ಪ್ರಕೃಷ್ಟಗುಣ ಪೂರ್ಣಾಯ ವ್ಯಾಪ್ತ್ಯಾಯ ಸ್ವಾಂಘ್ರಿ ಸೇವಿನಾಂ ।
ಪ್ರಪನ್ನಸಾರ್ಥವಾಹಾಯ ಯತಿರಾಜಾಯ ಮಂಗಳಂ ॥

ಪ್ರಾಚೀನಾನಾಂ ಸುಪಕ್ವಾನಾಂ ಫಲಾಯತಪಸಾಂನೃಣಾಂ ।
ಜಗಜ್ಜೀವಾತವೇ ಭೂಯಾತ್ ಯತಿರಾಜಾಯ ಮಂಗಳಂ ॥

ವೇದಾತ್ಮಕ ಪ್ರಮಾಣೇನ ಸಾತ್ವಿಕೈಶ್ಚ ಪ್ರಮಾತೃಭಿಃ ।
ಪ್ರಮೇಯೇನ ಸಹ ಶ್ರೀಮಾನ್ ವರ್ಧತಾಂ ಯತಿ ಶೇಖರಃ ॥

(x) ಯತಿರಾಜ ಮಂಗಳ

ಏನುಮಹಿಮೆಯೊ ನಿನ್ನ ಪಾಡಲಳವೇ ಸ್ವಾಮಿ
ಯತಿರಾಜ ಯತಿರಾಜ ಜಯಮಂಗಳಂ ।
ಯತಿರಾಜ ಯತಿರಾಜ ಶುಭಮಂಗಳಂ ॥

ಭೂತಪುರಿಯಲಿ ಹುಟ್ಟಿ ಕಂಚಿಯಲಿ ಕಲಿತು
ಯಾದವರ ಅವ ಕೃಪೆಗೆ ಅನವರತವಾದೆ ॥
ಕಾಂಚಿ ಪೂರ್ಣರ ಕೂಡಿ ವರದರಾಜನ ಸೇರಿ
ತತ್ತ್ವವನು ನೀ ಅರಿತೆ ವಿಶಿಷ್ಟಾದ್ವೈತದ ॥

ದೀನದಲಿತರ ಸೇವೆ ಮಾಡಲೆಂದೇ ಸ್ವಾಮಿ
ಸಂಸಾರವ ತೊರೆದು ಸಂನ್ಯಾಸಿಯಾದೆ ।
ದೇಶ ಸುತ್ತುತ ಬಂದೆ ಕೋಶ ಓದುತ ನಿಂದೆ
ಪಾಮರರ ಕಣ್ಣೀರ ಒರೆಸ ಬಂದೆ ॥

ಗೋಷ್ಠಿಪೂರ್ಣರ ಕೂಡಿ ರಹಸ್ಯ ಮಂತ್ರವ ಅರಿತು
ತವಕದಲಿ ಬಂದು ಗೋಪುರವ ಹತ್ತಿ ನಿಂದೆ ।
ಬನ್ನಿ ಬನ್ನಿ ಎಂದು ದೀನದಲಿತರ ಕರೆದೆ
ಗುಟ್ಟು ರಟ್ಟನೆ ಮಾಡಿ ಮುಕ್ತಿಗೆಂದು ॥

ರಾಮನಾಥನ ಕಂಡೆ ಕಾವೇರಿಯಲಿ ಮಿಂದೆ
ಗಾಯತ್ರಿಶಿಲೆಏರಿ ಜಪವಗೈದೆ ।
ಸಾಲಿಗ್ರಾಮಕೆ ಬಂದೆ ನಾರಸಿಂಹನ ಕಂಡೆ
ಶ್ರೀಪಾದತೀರ್ಥ ತಂದೆ ಯತಿರಾಜ ॥

ತೊಂಡನೂರಿಗೆ ಬಂದೆ ಬಿಟ್ಟಿದೇವನ ಕಂಡೆ
ಶಿಷ್ಯನಾಗಲು ರಾಜ ವಿಷ್ಣುವರ್ಧನ ಎಂದೆ ।
ರೈತರೆಲ್ಲರು ಬಂದು ನೀರು ಬವಣೆಯ ಪೇಳೆ
ಅವರೊಡನೆ ಕೆರೆಕಟ್ಟಿ ಹರುಷ ತಂದೆ ॥

ಕೇಶವನ ಗುಡಿಯಲಿ ವೇಲಾಪುರಿಯಲ್ಲಿ
ಶಾಸನವನ ಬರೆಸಿ ಸಾಕ್ಷಿಯನು ಇರಿಸಿ ।
ಕುಲವೆಲ್ಲ ಒಂದೆ ಕೇಶವನು ತಂದೆ
ಕೈಚಾಚಿ ಮುಂದೆ ಬನ್ನಿ ಬನ್ನಿ ಎಂದೆ ॥

ಮೇಲುಕೋಟೆಗೆ ಬಂದು ಚೆಲುವ ನಾರಣನ ಕಂಡು
ಗುಡಿಕಟ್ಟಿ ಪೂಜಿಸಿದ ಕೀರ್ತಿ ನಿನ್ನದು ।

ಡಿಲ್ಲಿ ಯಾತ್ರೆಯ ಮಾಡಿ ಶೆಲ್ವಪಿಳ್ಳೆಯ ತಂದು
ಅಂತ್ಯಜರ ಅಪ್ಪಿ ಕರೆತಂದ ವಿಜಯ ನಿನದು ||

ಭಕ್ತಿಯೇ ಮುಕ್ತಿಗೆ ಸಾಧನವು ನಮಗೆಂದು
ಅವತರಿಸಿದಾ ನಿನ್ನ ಲೀಲೆ ಹಿರಿದು |
ಜಗವನುದ್ಧರಿಸ ಬಂದೆ ಯತಿರಾಜಸ್ವಾಮಿ
ಶರಣು ಶರಣು ಎನುತಿಹರು ಭಕುತ ವೃಂದ ||

ಆದಿಶೇಷನು ನೀನೆ ಲಕ್ಷ್ಮಣ ಬಲರಾಮ ನೀನೆ
ಕೋಯಿಲಣ್ಣನು ನೀನೇ ಗೋದಾಗ್ರಜ |
ಇನಿತು ಪೆಸರನು ಪೊತ್ತು ಕಣ್ಣ ಪಾರ್ಥರ ಕೈಲಿ
ಮಂಗಳವ ಪಾಡಿಸಿದ ಕೀರ್ತಿ ನಿನದು ||

ಏನು ಮಹಿಮೆಯೊ ನಿನ್ನ ಪಾಡಲಳವೇ ಸ್ವಾಮಿ
ಯತಿರಾಜ ಯತಿರಾಜ ಜಯ ಮಂಗಳ
ಯತಿರಾಜ ಯತಿರಾಜ ಶುಭಮಂಗಳ ||

ಕಾಲೇವರ್ಷತು ವಾಸವಃ ಕ್ಷಿತಿ ಭುಜೋರಕ್ಷಂತು ಸಮ್ಯಕ್ ಮಹೀಂ
ಸರ್ವೇಸಂತು ನಿರಾಮಯಾಶ್ಚಕೃತಿನಃ ಸತ್ತ್ವೋತ್ತರಾಃ ಪ್ರಾಣಿನಃ |
ಪುಣ್ಯಾಲೋಕಮಿದಂ ಪುನಾತು ಭಗವದ್ಭಕ್ತಿಃ ಚಿರಸ್ಥಾಯಿನೀ
ಮಾಲಾವದ್ಯತಿಶೇಖರಸ್ಯ ವಿಹರತ್ವಾಜ್ಞಾ ನೃಣಾಂ ಮೂರ್ಧಸು ||

## ೧೩. ರಾಮಾನುಜರ ಗುರು-ಶಿಷ್ಯ ಪರಂಪರೆ

### ೧. ರಾಮಾನುಜರ ಗುರು ಪರಂಪರೆ

ಶ್ರೀಮನ್ನಾರಾಯಣ-ಶ್ರೀಮಹಾಲಕ್ಷ್ಮಿ-ವಿಷ್ವಕ್ಸೇನ-ನಮ್ಮಾಳ್ವಾರ್ (ಶಠಗೋಪ) -

ನಾಥಮುನಿ - ಪುಂಡರೀಕಾಕ್ಷ (-ಉಯ್ಯಕ್ಕೊಂಡಾರ್), ರಾಮಮಿಶ್ರ (ಮಣಕ್ಕಾಲ್ ನಂಬಿ) - ಯಾಮುನಾಚಾರ್ಯ (ಆಳವಂದಾರ್) - ಮಹಾಪೂರ್ಣ (ಪೆರಿಯನಂಬಿ) - ರಾಮಾನುಜ (ಎಂಬೆರುಮಾನಾರ್)

### ೨. ರಾಮಾನುಜರ ಶಿಷ್ಯ ಪರಂಪರೆ

ರಾಮಾನುಜರನ್ನೇ ಅನುಸರಿಸುವ ದೇಶಿಕ (ವಡಗಲೆ) ಮತ್ತು ಜೀಯರ್ (ತೆಂಗಲೆ) ಎಂಬ ಎರಡು ಸಂಪ್ರದಾಯಗಳು ಬೆಳೆದು ಬರುತ್ತಿವೆ. ಅವುಗಳ ಗುರುಪರಂಪರೆ ಹೀಗಿದೆ:

1. ರಾಮಾನುಜ - ತಿರುಕ್ಕುರುಹೈಪ್ಪಿರಾನ್‌ಪಿಳ್ಳಾನ್ - ವಿಷ್ಣುಚಿತ್ತ(ಎಂಗಳಾಳ್ವಾನ್) -

ವಾತ್ಸ್ಯ ವರದಾಚಾರ್ಯ (ನಡಾದೂರಮ್ಮಾಳ್) - ಆತ್ರೇಯ ರಾಮಾನುಜ - ವೇದಾಂತ ದೇಶಿಕ (ತೂಪ್ಪುಲ್ ಪಿಳ್ಳೈ) ಇವರು ವಡಗಲೆ ಸಂಪ್ರದಾಯದ ಮುಖ್ಯ ಆಚಾರ್ಯರುಗಳು.

ರಾಮಾನುಜರ ಶ್ರೀಭಾಷ್ಯಗ್ರಂಥವನ್ನು ಕಾಲಕ್ಷೇಪ ಮಾಡುವಾಗ ವಾತ್ಸ್ಯವರದಾಚಾರ್ಯರು ಹೇಳಿದ ಅರ್ಥ ವಿಶೇಷವನ್ನು ಸಂಗ್ರಹಿಸಿ ಸುದರ್ಶನಾಚಾರ್ಯರು ರಚಿಸಿದ 'ಶ್ರುತ ಪ್ರಕಾಶಿಕಾ' ಎಂಬ ವಿವರಣ ಗ್ರಂಥಕ್ಕೆ ವೇದಾಂತ ದೇಶಿಕರು ಹೆಚ್ಚು ಪ್ರಾಮುಖ್ಯ ನೀಡಿದ್ದಾರೆ.

ii. ರಾಮಾನುಜ - ಕೂರತ್ತಾಳ್ವಾನ್- ಗೋವಿಂದ ಭಟ್ಟರ್ (ಎಂಬಾರ್) ಪರಾಶರ ಭಟ್ಟರ್ - ನಂಜೀಯರ್-ನಂಪಿಳ್ಳೈ-ಪೆರಿಯವಾಚ್ಚಾನ್‌ಪಿಳ್ಳೈ-ವಡಕ್ಕುತ್ತಿರುವೀಧಿಪಿಳ್ಳೈ-ಪಿಳ್ಳೈಲೋಕಾಚಾರ್ಯ-ತಿರುವಾಯ್ಮೊಳಿಪಿಳ್ಳೈ (ಶ್ರೀಶೈಲೇಶ) ಅಳಗಿಯಮಣವಾಳ ಜೀಯರ್ (ಮಣವಾಳ ಮಾಮುನಿ) ಇವರು ತೆಂಗಲೆ ಸಂಪ್ರದಾಯದ ಮುಖ್ಯ ಆಚಾರ್ಯರು.

ನಮ್ಮಾಳ್ವಾರ್ ಅವರ ತಿರುವಾಯ್ಮೊಳಿ ಅಥವಾ ಭಗವದ್ವಿಷಯವನ್ನು ಕಾಲಕ್ಷೇಪ ಮಾಡುವಾಗ ನಂಪಿಳ್ಳೈಯವರು ಹೇಳಿದ ಅರ್ಥವಿಶೇಷವನ್ನು ಸಂಗ್ರಹಿಸಿ ವಡಕ್ಕುತ್ತಿರುವೀಧಿ ಪಿಳ್ಳೈಯವರು ರಚಿಸಿದ 'ಮುಪ್ಪತ್ತಾರಾಯಿರಪ್ಪಡಿ' ಎಂಬ ವ್ಯಾಖ್ಯಾನ ಗ್ರಂಥಕ್ಕೆ ತೆಂಗಲೆಯ ಮಣವಾಳ ಮಾಮುನಿಗಳು ಹೆಚ್ಚು ಪ್ರಾಮುಖ್ಯ ನೀಡಿದ್ದಾರೆ.

ದೇಶಿಕ ಸಂಪ್ರದಾಯ ಮತ್ತು ಜೀಯರ್ ಸಂಪ್ರದಾಯ ಎರಡೂ ಎರಡು ಕಣ್ಣುಗಳಂತೆ ಬೆಳೆದು ಬಂದು ರಾಮಾನುಜ ದರ್ಶನದ ಪ್ರವರ್ತನದಲ್ಲಿ ತೊಡಗಿವೆ. ಸಂನ್ಯಾಸಿಗಳಾದ ಆಚಾರ್ಯರುಗಳು ಜೀಯರ್ ಮಠ, ಪರಕಾಲ ಮಠ, ಅಹೋಬಿಲ ಮಠ, ಆಂಡವನ್ ಆಶ್ರಮ ಇವುಗಳಲ್ಲಿ ಇದ್ದುಕೊಂಡು ಶ್ರೀವೈಷ್ಣವ ಮತವನ್ನು ಉಳಿಸಿ, ಬೆಳೆಸಿ ಪ್ರಚಾರ ಮಾಡುತ್ತಿದ್ದಾರೆ. ಇವರಂತೆಯೇ ಅನೇಕ ನಿಷ್ಠಾವಂತ ಗೃಹಸ್ಥರೂ ಸಹ ಸ್ವಯಮಾಚಾರ್ಯ ಪುರುಷರು ಎನಿಸಿಕೊಂಡು ಬಹು ಪ್ರಾಚೀನ ಕಾಲದಿಂದಲೂ ತತ್ತ್ವೋಪದೇಶ, ಸಮಾಶ್ರಯಣ ಮತ್ತು ಪ್ರಪತ್ತಿಗಳನ್ನು ಮಾಡುತ್ತಾ ರಾಮಾನುಜ ದರ್ಶನದ ಸಂವರ್ಧನೆಗೆ, ಆ ಮೂಲಕ ಜನರ ಉದ್ಧಾರಕ್ಕೆ ನೆರವಾಗುತ್ತಿದ್ದಾರೆ.

ಪೂರ್ವಾಚಾರ್ಯರ ತತ್ತ್ವಚಿಂತನೆ, ಆಚೈತನ್ಯಗಳಿಂದ ಪ್ರೇರಿತರಾಗಿ ಪರಿಪಾಕಗೊಂಡ ಆಚಾರ ಸರಣಿ, ಅದರ ಪರಿಣಾಮವಾಗಿ ಉಂಟಾದ ಜೀವನಪಲ್ಲಟ, ಇವು ಈಗ ಅವಶ್ಯವಾಗಿ ಬೇಕಾಗಿವೆ. ಶ್ರೀವೈಷ್ಣವ ಮತದ ಈಗಿನ ಅನುಯಾಯಿಗಳು ತಮ್ಮ ಹಿಂದಿನ ಆಚಾರ್ಯರುಗಳು ಎತ್ತಿ ಹಿಡಿದ ತ್ಯಾಗ, ವೈರಾಗ್ಯ, ಸೇವೆ ಮುಂತಾದ ಸಾಮಾಜಿಕ ತತ್ತ್ವಗಳನ್ನು ಅನುಸರಿಸುತ್ತಿಲ್ಲ. ಜೊತೆಗೆ ಮತದ ಅಧ್ಯಯನ ಅಭ್ಯಾಸ ಹಾಗೂ ನಿಷ್ಠಾವಂತ ಪ್ರಾಮಾಣಿಕ ಜೀವನ ಇವೆರಡೂ ಜನಪ್ರಿಯತೆಯನ್ನು ಕಳೆದುಕೊಂಡಿವೆ. ಜೊತೆಗೆ ವಡಗಲೆ-ತೆಂಗಲೆ ಎಂಬ ಒಡಕುಗಳು ಹೆಚ್ಚಿವೆ.

ಇಂದಿನ ವಿಜ್ಞಾನ ಯುಗಕ್ಕೆ ಅನುಗುಣವಾಗಿ ನಮ್ಮ ಶ್ರೀವೈಷ್ಣವ ಸಮಾಜವು ಬೆಳೆಯಬೇಕು. ಅದಕ್ಕಾಗಿ ನಮ್ಮ ಸಂಪ್ರದಾಯದ ಜೊತೆಗೆ ಲೌಕಿಕ ವಿದ್ಯಾಭ್ಯಾಸವನ್ನು ಮಾಡಿ ಪ್ರಗತಿ ಸಾಧಿಸಬೇಕು.

ಈಗ ಶ್ರೀವೈಷ್ಣವ ಸಮಾಜವು ಪಾರಮಾರ್ಥಿಕವಾಗಿ ಹಾಗೂ ಲೌಕಿಕವಾಗಿ ಕ್ಷೀಣಿಸುತ್ತಿದೆ. ನಮ್ಮಲ್ಲಿ ಒಗ್ಗಟ್ಟು ಹಾಗೂ ಸರಿಯಾದ ಮಾರ್ಗದರ್ಶನ ಇಲ್ಲದಿರುವುದೇ ಇದಕ್ಕೆ ಕಾರಣ. ಇತರ ಪಂಗಡಗಳ ಸಮಾಜಕ್ಕೆ ಹೋಲಿಸಿದಾಗ ನಾವು ಹಿಂದುಳಿದಿದ್ದೇವೆ ಎನಿಸುತ್ತದೆ. ಆದ ಕಾರಣ ನಾವು ಎಚ್ಚೆತ್ತುಕೊಳ್ಳಬೇಕು. ನಮಗೆಲ್ಲರಿಗೂ ಇಂದು ಮಠಾಧೀಶರುಗಳಲ್ಲಿ ಭಯಭಕ್ತಿಗಳಿವೆ. ಮಠಗಳಿಗೆ ಸಾಕಷ್ಟು ಆಸ್ತಿ, ಸಂಪಾದನೆ ಇದೆ. ನಮ್ಮ ಮಠಾಧೀಶರು ಹಾಗೂ ಹಿರಿಯ ಮುತ್ಸದ್ದಿಗಳು ಸೇರಿ ಒಗ್ಗಟ್ಟಿನಿಂದ ಶ್ರೀವೈಷ್ಣವ ಸಮಾಜದ ಏಳಿಗೆಗೆ ಬೇಕಾದ ರೂಪುರೇಷೆಗಳನ್ನು ನಿರ್ಮಿಸಿ, ಶ್ರೀವೈಷ್ಣವ ಸಮಾಜದ ಲೌಕಿಕ ಹಾಗೂ ಪಾರಮಾರ್ಥಿಕ ಏಳಿಗೆಗೆ ಕಾರಣವಾಗಲು ಶ್ರಮಿಸಬೇಕು.

ಪರಧರ್ಮೀಯರ ದಬ್ಬಾಳಿಕೆಯಿಂದ ಕಣ್ಮರೆಯಾಗುವ, ಜಾಗತಿಕ ಮಂಚದಿಂದಲೇ ಅಳಿಸಿಹೋಗುವ ಸನ್ನಿವೇಶವನ್ನು ತಲುಪಿರುವ ಹಿಂದೂ ಸಮಾಜದಂತೆ ಅದರ ಅಂಗವಾದ ಶ್ರೀವೈಷ್ಣವ ಸಮಾಜವೂ ಅವನತಿಯ ಹಾದಿಯಲ್ಲಿದೆ. ಹಿಂದುತ್ವವನ್ನು ಪ್ರಪಂಚದಿಂದಲೇ ನಿರ್ಮೂಲನಗೊಳಿಸಬೇಕೆಂಬ ಷಡ್ಯಂತ್ರ ರಚನೆಯಾಗಿರುವ ಈ ಸಂದರ್ಭದಲ್ಲಿ ನಾವೆಲ್ಲರೂ ಒಗ್ಗಟ್ಟಾಗಿ ಸೇರಿ ರಾಮಾನುಜರ ಕನಸಿನ ಕೂಸಾದ ನವ ಶ್ರೀವೈಷ್ಣವ ಸಮಾಜ ನಿರ್ಮಾಣದತ್ತ ಮುಂದಾಗುವುದು ನಮ್ಮೆಲ್ಲರಿಗೂ ಕ್ಷೇಮಕರ.

ಈಗ ಸಕ್ರಿಯ ಪಾತ್ರವಹಿಸುತ್ತಿರುವ ಎಲ್ಲ ಶ್ರೀವೈಷ್ಣವ ಸಂಘ ಸಂಸ್ಥೆಗಳನ್ನು ಒಂದು ಸೂತ್ರದಲ್ಲಿ ಸೇರಿಸಿ, ಸಮಾನ ವೇದಿಕೆಯನ್ನು ರೂಪಿಸಿಕೊಂಡು ಶ್ರೀವೈಷ್ಣವ ಸಮುದಾಯವು ಶಕ್ತಿಶಾಲಿಯಾಗಿ ಕಾರ್ಯನಿರ್ವಹಿಸುವಂತೆ ಮಾಡಲು ನಾವೆಲ್ಲರೂ ಟೊಂಕಕಟ್ಟಿ ನಿಲ್ಲಬೇಕಾದುದು ಅಗತ್ಯ.

## ಅನುಬಂಧ ೧

### ಗ್ರಂಥಗಳ ಪಟ್ಟಿ

| | |
|---|---|
| ಪೂರ್ವಾಚಾರ್ಯ ಪ್ರಭಾವಂ | ಅಣ್ಣಂಗರಾಚಾರ್ಯಸ್ವಾಮಿ |
| ರಾಮಾನುಜರ ದಿವ್ಯಜೀವನ ಚರಿತ್ರೆ | ಬೇಲೂರು ಕೇಶವದಾಸರು |
| ಧರೆಗಿಳಿದ ದೇವ | ಶ್ರೀಮತಿ ಪ್ರಿಯದರ್ಶಿನಿ |
| ಪ್ರಪನ್ನಾಮೃತ | ಎನ್. ನರಸಿಂಹಾಚಾರ್ಯ |
| ಯತಿರಾಜವೈಭವಂ | ರಘುಸುತ |
| ಯತಿರಾಜ ರಾಮಾನುಜ | ಜಯಮ್ಮ |
| ಶ್ರೀರಾಮಾನುಜ ಸ್ತೋತ್ರಮಾಲಾ | ವಿದ್ವಾನ್ ರಘುಸುತ |
| ಜಗದಾಚಾರ್ಯ ರಾಮಾನುಜ | ಶ್ರೀದೇವಿ |
| ನನ್ನ ಆಚಾರ್ಯ | ಸವ್ಯಸಾಚಿ |
| ರಾಮಾನುಜ ದರ್ಶನ | ಡಾ|| ಎನ್.ಎಸ್. ಅನಂತರಂಗಾಚಾರ್ |
| ರಾಮಾನುಜ ಸಿದ್ಧಾಂತ ದರ್ಪಣ | ಹೆಚ್.ಜಿ. ರಾಮಯ್ಯಂಗಾರ್ |
| ಆಚಾರ್ಯತ್ರಯರು | ಸಿ. ಲಕ್ಷ್ಮೀನಾರಾಯಣ್ |
| ಶ್ರೀಮದಾಂಡಾಳ್‌ವೈಭವಂ | ಬಿ.ಎಸ್.ಎಸ್. ಕೌಶಿಕ್ |
| Sri. Ramanuja | Swami Tapasyananda |
| Life of Sri Ramanuja | Swami Ramakrishnananda |
| Studies in Ramanuja | Ramanuja Vedantha Centre, Madres |
| Ramanujas Teachings | M. Yamunacharya |

## ಅನುಬಂಧ ೨

### ಲೇಖಕರ ಪರಿಚಯ

**ಹೆಚ್.ಜಿ. ರಾಮಯ್ಯಂಗಾರ್**

*ಜನನ : ೨-೧-೧೯೨೪*

೧. ವಿದ್ಯಾರ್ಹತೆ

| | | |
|---|---|---|
| ಎಸ್.ಎಸ್.ಎಲ್.ಸಿ. | ಸರ್ಕಾರಿ ಪ್ರೌಢಶಾಲೆ ಹಾಸನ (ಸಂಸ್ಕೃತ, ಚರಿತ್ರೆ, ಭೂಗೋಳ, ಹಿಂದಿ) | ೧೯೪೩ |
| ಇಂಟರ್ ಕಲೆ | ಇಂಟರ್ ಮೀಡಿಯೇಟ್ ಕಾಲೇಜು, ಮೈಸೂರು (ಸಂಸ್ಕೃತ, ಚರಿತ್ರೆ, ತರ್ಕಶಾಸ್ತ್ರ, ಹಿಂದಿ) | ೧೯೪೫ |

| | | |
|---|---|---|
| ಬಿ.ಎ. | ಮಹಾರಾಜಾ ಕಾಲೇಜು, ಮೈಸೂರು (ಚರಿತ್ರೆ, ರಾಜ್ಯಶಾಸ್ತ್ರ, ಹಿಂದಿ) | ೧೯೪೭ |
| ಬಿ.ಟಿ. | ಟೀಚರ್ಸ್ ಕಾಲೇಜು, ಮೈಸೂರು (ಇಂಗ್ಲೀಷ್, ಚರಿತ್ರೆ) | ೧೯೪೮ |
| ಕೇಂದ್ರನಾಯಕ | ಭಾರತ ಸೇವಾದಳ, ಬೆಂಗಳೂರು (ದೈಹಿಕ ಶಿಕ್ಷಣ) | ೧೯೫೩ |
| ಡಿ.ಬಿ.ಇ. | ಮೂಲಶಿಕ್ಷಣ ತರಬೇತಿ ಕೇಂದ್ರ ವಿದ್ಯಾನಗರ (ಮೂಲ ಶಿಕ್ಷಣ) | ೧೯೫೪ |
| ಹಿಂದೂ ಧರ್ಮ | ಶ್ರೀವೆಂಕಟೇಶ್ವರ ಪ್ರಾಚ್ಯ ಸಂಶೋಧನ ಸಂಸ್ಥೆ, ತಿರುಪತಿ | ೧೯೫೫ |
| ಎಂ.ಎಡ್ (ಭಾಗಶಃ) | ಮೈನ್ಸ್ಟನ್ ಟ್ರೈನಿಂಗ್ ಕಾಲೇಜ್, ಮದರಾಸು (ಮೂಲಶಿಕ್ಷಣ) | ೧೯೫೮ |

ಸರ್ಕಾರಿ ಸೇವೆಯ ಆರಂಭ : ೭-೬-೧೯೪೮, ಸೇವೆಯಿಂದ ನಿವೃತ್ತಿ : ೩೧-೧-೧೯೭೯

**೨. ಕೆಲಸ ಮಾಡಿದ ಹುದ್ದೆ-ಸ್ಥಳಗಳು**

ಮುಖ್ಯೋಪಾಧ್ಯಾಯ, ಸರ್ಕಾರಿ ಮಾಧ್ಯಮಿಕ ಶಾಲೆ, ತಲಕಾಡು, ಬೆಂಗಳೂರು.

ಸಹಾಯೋಪಾಧ್ಯಾಯ, ಸರ್ಕಾರಿ ಪ್ರೌಢಶಾಲೆ, ಚನ್ನಪಟ್ಟಣ, ಬೆಂಗಳೂರು, ಚಿಕ್ಕಬಳ್ಳಾಪುರ, ಕೋಲಾರ.

(ಹಂಗಾಮಿ ಮುಖ್ಯೋಪಾಧ್ಯಾಯ, ಕೋಟೆ ಪ್ರೌಢಶಾಲೆ, ಬೆಂಗಳೂರು).

ಸಹಾಯೋಪಾಧ್ಯಾಯ, ಮೂಲ ಶಿಕ್ಷಣ ತರಬೇತಿ ಕೇಂದ್ರ, ಸುಬ್ರಹ್ಮಣ್ಯಪುರ. ಬೆಳ್ಳಾರ ಚಿನ್ನದಗಣಿ, ಕೋಲಾರ, ತುಮಕೂರು.

(ಅರೆಕಾಲಿಕ ಉಪನ್ಯಾಸಕ, ಹಿಂದೀ ಶಿಕ್ಷಕರ ಟ್ರೈನಿಂಗ್ ಕಾಲೇಜು, ಬೆಂಗಳೂರು).

ಶಾಲಾ ತನಿಖಾಧಿಕಾರಿ, ತುಮಕೂರು, ಬೆಂಗಳೂರು.

ಪ್ರಾಚಾರ್ಯ, ಮೂಲಶಿಕ್ಷಣ ತರಬೇತಿ ಕೇಂದ್ರ, ಬೀರೂರು.

ಸಹಾಯಕ ನಿರ್ದೇಶಕ, ರಾಜ್ಯ ಶಿಕ್ಷಣ ಸಂಶೋಧನ ಸಂಸ್ಥೆ, ಬೆಂಗಳೂರು.

ಸಹಾಯಕ ಶಿಕ್ಷಣಾಧಿಕಾರಿ, ಬೆಂಗಳೂರು, ರಾಮನಗರ.

ವಿಷಯ ತನಿಖಾಧಿಕಾರಿ, ಉಪನಿರ್ದೇಶಕರ ಕಾರ್ಯಾಲಯ, ಬೆಂಗಳೂರು, ಹಾಸನ

(ಹಂಗಾಮಿ ಶಿಕ್ಷಣಾಧಿಕಾರಿ, ಉಪನಿರ್ದೇಶಕರ ಕಾರ್ಯಾಲಯ, ಹಾಸನ).

೩. ಮಾಡಿದ ಕೆಲಸಗಳು

೧. ಸಂಸ್ಕೃತ, ವೇದ, ಸಂಗೀತ, ಪ್ರಬಂಧ, ಸ್ತೋತ್ರಗಳನ್ನು ಗುರುಮುಖೇನ ಕಲಿತಿದ್ದಾರೆ.

೨. ಕನ್ನಡ, ಇಂಗ್ಲೀಷ್, ಸಂಸ್ಕೃತ, ಹಿಂದಿ ಭಾಷೆಗಳನ್ನು ಕಲಿತಿದ್ದಾರೆ. ತಮಿಳು, ಮಾತಾನಾಡುವ ಭಾಷೆ. ತೆಲಗು ಅರ್ಥವಾಗುತ್ತದೆ.

ಪಗಡೆ, ಕೇರಂ, ಬ್ಯಾಡ್‌ಮಿಂಟನ್ ಇಷ್ಟವಾದ ಆಟಗಳು.

೩. ಮಾಧ್ಯಮಿಕ, ಪ್ರೌಢ ಮತ್ತು ಶಿಕ್ಷಕರ ತರಬೇತಿ ಶಾಲೆಗಳಲ್ಲಿ ಅಂಕಗಣಿತ, ಇಂಗ್ಲೀಷ್, ಹಿಂದಿ, ಚರಿತ್ರೆ, ಭೂವಿವರಣೆ, ಪೌರನೀತಿ, ಶಿಕ್ಷಣ ವಿಷಯಗಳನ್ನು ಕಲಿಸಿದ್ದಾರೆ.

೪. ಅಭ್ಯಾಸ ಪತ್ರಿಕೆ, ಪಠ್ಯಕ್ರಮ, ಮೌಲ್ಯಮಾಪನಗಳ ಕಾರ್ಯಾಗಾರ ಮತ್ತು ಪುನರ್ಪಠನ ಮನನ ಶಿಬಿರಗಳಲ್ಲಿ ಸಕ್ರಿಯ ಭಾಗವಹಿಸಿದ್ದಾರೆ.

೫. ಭಾರತ ಸೇವಾದಳದ ಕೇಂದ್ರನಾಯಕ ಪದವಿ ಗಳಿಸಿದ್ದಾರೆ.

೬. ಹಿಂದೂ ಧರ್ಮದ ಬಗ್ಗೆ ತಿರುಪತಿಯಲ್ಲಿ ಶಿಕ್ಷಣ ಪಡೆದು ಮೂರನೇ ರ್‍ಯಾಂಕ್ ಗಳಿಸಿದ್ದಾರೆ.

೭. ವಯಸ್ಕರ ಶಿಕ್ಷಣಕ್ಕಾಗಿ ಕೃತಿ ರಚನೆಯಲ್ಲಿ ತರಬೇತಿ ಪಡೆದಿದ್ದಾರೆ.

೮. ಬೆಂಗಳೂರು ಆಕಾಶವಾಣಿಯಿಂದ ಪ್ರೌಢಶಾಲಾ ವಿದ್ಯಾರ್ಥಿಗಳಿಗಾಗಿ

ಸುಭಾಷ್ ಚಂದ್ರಬೋಸರ ಬಗ್ಗೆ ಮಾತನಾಡಿದ್ದಾರೆ.

೯. ಮುಖ್ಯೋಪಾಧ್ಯಾಯ, ಸಹಾಯಕ ಶಿಕ್ಷಣಾಧಿಕಾರಿ, ಆದಾಗ ರೆಡ್‌ಕ್ರಾಸ್ ತಂಡ, ವರ್ಗರಹಿತಶಾಲೆ, ಶಾಲಾ ಸಂಕೀರ್ಣ ಪ್ರಾರಂಭಿಸಿ ಬೆಳೆಸಿದ್ದಾರೆ.

೧೦. ಶಿಕ್ಷಕರ ತರಬೇತಿ ಸಂಸ್ಥೆ, ಶಾಲಾ ವಿದ್ಯಾರ್ಥಿ ಸಂಘ, ಭಾರತ ಸೇವಾದಳ ಶಿಕ್ಷಣ ಶಿಬಿರ ಇವುಗಳಲ್ಲಿ ಉಪನ್ಯಾಸ ಮಾಡಿದ್ದಾರೆ.

೧೧. ವಿಷಯ ತನಿಖಾಧಿಕಾರಿಯಾಗಿ ಪ್ರೌಢಶಾಲೆಗಳಲ್ಲಿ ಸಮಾಜಶಾಸ್ತ್ರ, ಇಂಗ್ಲೀಷ್, ಹಿಂದಿ, ಸಂಸ್ಕೃತ ಪಾಠಗಳನ್ನು ವೀಕ್ಷಿಸಿ, ವಿಮರ್ಶಿಸಿ, ಶಿಕ್ಷಕರಿಗೆ ಮಾರ್ಗದರ್ಶನ ಮಾಡಿದ್ದಾರೆ. ಹಂಗಾಮಿ ಶಿಕ್ಷಣಾಧಿಕಾರಿಯಾಗಿ ಪ್ರೌಢಶಾಲೆಗಳಿಗೆ ಮಾರ್ಗದರ್ಶನ ಮಾಡಿದ್ದಾರೆ.

೧೨. ೧೯೪೨ರ ಭಾರತ ಬಿಟ್ಟು ತೊಲಗಿ ಚಳವಳಿಯಲ್ಲಿ ಭಾಗವಹಿಸಿದ್ದಾರೆ.

೧೩. ಡಾ|| ಎಂ.ಸಿ. ಮೋದಿಯವರ ಉಚಿತ ನೇತ್ರ ಚಿಕಿತ್ಸಾಶಿಬಿರ, ಶ್ರವಣಬೆಳಗೊಳದ ಮಸ್ತಕಾಭಿಷೇಕ, ಪೂರ್ವಏಷ್ಯಾ ರಾಷ್ಟ್ರಗಳ ಆರ್ಥಿಕ ಸಮ್ಮೇಳನ (ECAFE) ಇವುಗಳಲ್ಲಿ ಭಾರತ ಸೇವಾದಳದ ಸ್ವಯಂ ಸೇವಕರಾಗಿ ಕೆಲಸ ಮಾಡಿದ್ದಾರೆ.

## ೩. ಲೇಖಕರ ಬಗ್ಗೆ ಅಭಿಪ್ರಾಯಗಳ ಸಾರ

He is a hardworking, honest young man, bears an excellent character and conduct.

22/10/1951 ***Dr. S.T. Parthasarathy***
*District Surgeon*

He is hardworking, honest and quite dependable. I have come to regard him as a model of what a young man ought to be. His enthusiasm for work is remarkable.

He wields a facile style in kannada.

12/11/1951 ***D.L. Narasimhachar***
*Professor of Kannada*

As a student he was very Painstaking. He is of an excellent character.

28/11/1951 ***N. Nagappa***
*Professor of Hindi*

He has proved to be an able teacher of his subject He is a sincere worker, bears a good character and has a commanding personality

27/2/1953 ***K.S. Raja Iyengar***
*High School Headmaster*

He is a young man of integrity and excellent behaviour

He has high sense of discipline and great enthusiasm for work.

8/7/1954 ***B. Venkatesha Sastry***
*Training school Superintendent*

He is an young man who has a well balanced physique, mind and morals. He discharged his duties fearlessly and courteously, with a sense of dignity and responsibility

28/1/1955 ***V.S. Narayana Rao***
*Secretary, Bharath Sevadal*

He is an experienced and enthusiastic teacher having original ideas.

8/11/1960 ***- D.S. Ramakrishniah***
*Training School Headmaster*

His students admire and love him. He is intelligent, industrious and enthusiastic having excellent character and conduct. He has pleasing manners. He has been taking keen interest in Promoting social service activities.

31/10/1960 ***C.K. Venkataramayya***
*Govt Translator*

## ೪. ಕೃತಿಗಳ ಬಗ್ಗೆ ಅಭಿಪ್ರಾಯಗಳ ಸಾರ

The author has compressed a stupendous theme into a short span. His is a work of piety, scholorship, Conscientious, Thoroughness and a spirit of devotion.

***S.S. Raghavachar***
*Professor of Philosophy*

Humble devotion to God, love for all mankind and other lofty ideals must have inspired you to labour physically, mentally and spiritually to compble the book.

***- P. Sreenivasan***
*Lusaka Zanbia, Africa*

The author is an experienced teacher and educator.

***Swami Harshanananda***
*President, Ramakrishna Mutt*

The work is the loving and devoted labour of a veteran teacher, Educational officer and Administrator.

***- The Hindu***

ಲೇಖಕರು ಬರವಣಿಗೆಯಲ್ಲಿ ಚತುರರು. ಭಾಷೆಯನ್ನು ಸರಾಗವಾಗಿ, ಮಿತವಾಗಿ ಬಳಸಿ, ಅತ್ಯಂತ ಗೂಢವಾದ ವಿಷಯವನ್ನು ಅತಿ ಸುಲಭವಾಗಿ, ಅರ್ಥಭರಿತವಾಗಿ ನಿರೂಪಿಸ ಬಲ್ಲರು. ಅಗತ್ಯ ವಸ್ತುವನ್ನು ಸಂಗ್ರಹಿಸಿ, ಹೆಚ್ಚು ವಿವರಗಳ ಗೊಂದಲಕ್ಕೆ ಹೋಗದೆ ಸ್ಪಷ್ಟವಾಗಿ, ನೇರವಾಗಿ, ಸುಲಭ ಶೈಲಿಯಲ್ಲಿ ವಿಷಯವನ್ನು ನಿರೂಪಿಸುವುದರಲ್ಲಿ ಸಿದ್ಧಹಸ್ತರು.

***-ಕೆ.ವಿ. ಅನಂತಕೃಷ್ಣ***
*ವಿದ್ಯಾ ಇಲಾಖಾ ಸಹ ನಿರ್ದೇಶಕರು*

ವಿವಿಧ ಕ್ಷೇತ್ರಗಳಲ್ಲಿ ನಿವೃತ್ತರಾದವರು ನಿಮ್ಮ ಹಾಗೆ ಲೇಖನಿ ಹಿಡಿದಿದ್ದರೆ ನಮ್ಮ ಭಾಷೆ ಎಷ್ಟು ಸಂಪದ್ಯುಕ್ತವಾಗಿರುತ್ತಿತ್ತು ಎಂದು ಯೋಚಿಸುತ್ತೇನೆ. ನಿಮ್ಮ ಗ್ರಂಥಗಳು ಕನ್ನಡ ಧಾರ್ಮಿಕ ಸಾಹಿತ್ಯದ ಶ್ರೀಮಂತಿಕೆಗೆ ಒಳ್ಳೆಯ ಕೊಡುಗೆಗಳು.

***- ಡಾ|| ಹಾ.ಮಾ.ನಾಯಕ***
*ಮಾಜಿ ಕುಲಪತಿ*

ಲೇಖಕರ ವಿಶಾಲವಾದ ಅಧ್ಯಯನ, ಲೇಖನ ತಪಸ್ಸು ಮತ್ತು ಸಮಾರಾಧನೆಗಳ ಪರಿಪಾಕವಾಗಿದ್ದು ವಿಷಯ ಪ್ರತಿಪಾದನೆ ವಿಮರ್ಶಾತ್ಮಕ, ವಿಷಯ ನಿರೂಪಣೆ ಸ್ಪಷ್ಟ, ವೈಜ್ಞಾನಿಕವಾಗಿದೆ.

***- ಹೆಚ್.ಎಸ್. ವರದ ದೇಶಿಕಾಚಾರ್***
*ಸಂಸ್ಕೃತ ಪ್ರಾಧ್ಯಾಪಕರು*

ಅನುಷ್ಠಾನ; ಆಳವಾದ ಅಧ್ಯಯನ, ವ್ಯಾಪಕವಾದ ಅನುಭವ ಹೊಂದಿದ್ದಾರೆ. ವಿಷಯಗಳ ಹೃದಯಂಗಮ ವರ್ಣನೆ ಇದೆ.

*- ನಾ. ನಾಗಪ್ಪ*
*ಹಿಂದೀ ಪ್ರಾಧ್ಯಾಪಕರು*

ಲೇಖಕರು ಮೇಧಾವಿಗಳು, ಉತ್ತಮ ಶಿಕ್ಷಕರು, ಅಧ್ಯಾಪನ ಕಾರ್ಯದಲ್ಲಿ ನುರಿತವರು, ಗಾಂಧೀಜಿ ತೋರಿದ ಶಿಕ್ಷಣದಲ್ಲಿ ಪೂರ್ಣಪ್ರತ್ಯಯವುಳ್ಳವರು.

*- ಎಂ.ಪಿ.ಎಲ್. ಶಾಸ್ತ್ರಿ*
*ಸಂಸ್ಕೃತ ಪ್ರಾಧ್ಯಾಪಕರು*

ಲೇಖಕರು, ಅಧ್ಯಾಪಕರು, ಶಿಕ್ಷಣತಜ್ಞರು. ಬರೆಯಲು ಬೇಕಾದ ಅನುಭವ, ಅಧಿಕಾರ ಇರುವವರು. ಅವರ ಪಾಂಡಿತ್ಯ ಪಕ್ವವಾದುದು.

*- ಸಂಯುಕ್ತ ಕರ್ನಾಟಕ*

ಲೇಖಕರು ಸ್ವತಃ ಪ್ರಶಿಕ್ಷಿತ ಅಧ್ಯಾಪಕರು, ಶಿಕ್ಷಣಾಧಿಕಾರಿಗಳು. ಕನ್ನಡ, ಹಿಂದಿ, ಇಂಗ್ಲೀಷ್ ಭಾಷೆಗಳ ನೂರಾರು ಗ್ರಂಥಗಳ ಅಧ್ಯಯನ ಮಾಡಿದ್ದಾರೆ.

*- ಕನ್ನಡ ಪ್ರಭ*

ನೀವು ರಾಷ್ಟ್ರದ ದೊಡ್ಡ ಆಸ್ತಿ, ನೀತಿ ಹಾಗೂ ವಿದ್ಯೆಯ ನಿಧಿ ಆಗಿದ್ದೀರಿ.

*- ರುಮಾಲೆ ಚನ್ನಬಸವಯ್ಯ*
*ಭಾರತ ಸೇವಾದಳ*

ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಕನ್ನಡ ಪುಸ್ತಕಗಳನ್ನು ಬರೆದಿರುವ ಅನುಭವಿ ಲೇಖಕರು.

*- ಡಾ|| ಕೆ. ಕೃಷ್ಣಮೂರ್ತಿ*
*ಸಂಸ್ಕೃತ ಪ್ರಾಧ್ಯಾಪಕರು*

ಅಧ್ಯಾಪಕ , ಅಧಿಕಾರಿ ವೃತ್ತಿಯಲ್ಲಿದ್ದರೂ ಧಾರ್ಮಿಕ ವಿಷಯದಲ್ಲಿ ಇವರು ಮಾಡಿರತಕ್ಕ ಆಳವಾದ ಅಭ್ಯಾಸ ಶ್ಲಾಘನೀಯವಾದದು.

*-ಸಂಯುಕ್ತ ಶಿಕ್ಷಣ ಸಂಸ್ಥೆ ಪತ್ರಿಕೆ*

ಲೇಖಕರು ಸಂಸ್ಕೃತ, ತಮಿಳು, ಇಂಗ್ಲೀಷ್, ಕನ್ನಡ, ಹಿಂದಿ ಭಾಷೆಗಳಲ್ಲಿನ ವಿಪುಲ ಗ್ರಂಥರಾಶಿಯನ್ನು ಪರಾಮರ್ಶಿಸಿದ್ದಾರೆ.

*- ಪ್ರಜಾವಾಣಿ*

ಲೇಖಕರ ಪರಿಶ್ರಮ, ಅಕ್ಕರೆ, ಸಮಾಜದ ಬಗೆಗೆ ಕಳಕಳಿ, ಉತ್ತಮ ಶೈಲಿಯಲ್ಲಿ ಗಹನ ವಿಷಯಗಳ ನಿರೂಪಣೆ ಚೆನ್ನಾಗಿದೆ.

*- ಕೆ.ಎಸ್. ನಾರಾಯಣಾಚಾರ್*
*ಇಂಗ್ಲೀಷ್ ಪ್ರಾಧ್ಯಾಪಕರು*

ಅನೇಕ ಗ್ರಂಥಗಳ ಅಧ್ಯಯನ, ವಿಷಯಗಳ ನಿಷ್ಕರ್ಷೆ, ಆಳವಾದ ಜ್ಞಾನ, ನಿರೂಪಣಾ ಕೌಶಲ್ಯ ಹೊಂದಿದ್ದು ಮಹಾಸಾಧನೆ ಮಾಡಿ ಸಿದ್ಧಿ ಪಡೆದಿದ್ದಾರೆ. ವ್ಯವಹಾರ ಕುಶಲರೂ, ದೇಶ ಕಾಲವಿದರೂ ಆಗಿದ್ದು, ಪ್ರಾಚೀನ ಸಂಪ್ರದಾಯ ಪದ್ಧತಿಗಳಿಗೆ ವೈಜ್ಞಾನಿಕ ವಿಚಾರ ಧಾರೆಯನ್ನು ಬೆರೆಸಿ ಮೆರುಗು ಕೊಟ್ಟು, ಅವುಗಳ ಮಹತ್ವವನ್ನು ಎತ್ತಿ ತೋರಿಸಿದ್ದಾರೆ.

*-ವಿದ್ವಾನ್ ಎಸ್. ಟಿ. ಶ್ರೀನಿವಾಸಯ್ಯಂಗಾರ್*

ನಿಮ್ಮ ಪುಸ್ತಕಗಳು ಮನುಜನ ಏಳಿಗೆಗೆ ಸಂದೇಶಗಳನ್ನು ಅದ್ಭುತವಾಗಿ ಸಾರಿವೆ.

*-ಎಂ.ಎಲ್. ರಮೇಶ ಸ್ಥಪತಿ*

## ೫. ರಚಿಸಿದ ಕೃತಿಗಳು - ವರ್ಷ

*• ಶಿಕ್ಷಣ : ೭, • ಸಮಾಜಶಾಸ್ತ್ರ : ೧೪, • ಧರ್ಮ : ೩೨,*
*• ಜೀವನ ಚರಿತ್ರೆ: ೫, • ಆತ್ಮ ಕಥನ : ೧*

೧೯೫೬ ಕ್ರಿಯಾತ್ಮಕ ಶಿಕ್ಷಣ
೧೯೫೭ ವಿಶ್ವದರ್ಶನ
೧೯೬೦ ಸಾರ್ವತ್ರಿಕ ಪ್ರಾರ್ಥನೆ
೧೯೬೨ ಭಾರತೀಯ ಸ್ವಾತಂತ್ರ್ಯ ಚಳವಳಿ
೧೯೬೨ ಕರ್ಣಾಟಕ ದರ್ಶನ
೧೯೬೩ ಶಿಕ್ಷಣ ಪ್ರದೀಪ
೧೯೬೪ ಸಮಾಜ ಜ್ಞಾನಕೋಶ
೧೯೬೫ ನಮ್ಮ ನಾಡು ಭಾರತ
೧೯೭೦ ಸ್ವರಾಜ್ಯ ಸಂದರ್ಶನ
೧೯೭೧ ಸಮಾಜ ಕಲ್ಯಾಣ ಚಳವಳಿ
೧೯೭೪ ಲೋಕಧರ್ಮದರ್ಶನ
೧೯೭೫ ಶ್ರೀವೈಷ್ಣವ ಮತ ದೀಪಿಕೆ
೧೯೭೬ ಸಮಾಜಶಾಸ್ತ್ರ ಪಾರಬೋಧನೆ
೧೯೮೦ ಶ್ರೀ ಆಂಡಾಳ್ ಆಳ್ವಾರ್
೧೯೮೧ ಶೈವಧರ್ಮ ದರ್ಶನ
೧೯೮೨ ಶ್ರೀ ರಾಮಾನುಜ ಸಿದ್ಧಾಂತ ದರ್ಪಣ
೧೯೮೩ ವೈಷ್ಣವ ಧರ್ಮ ದರ್ಶನ
೧೯೮೪ ಹಿಂದೂ ಧರ್ಮದರ್ಶನ
೧೯೮೪ ವಿಶಿಷ್ಟಾದ್ವೈತದ ಪಂಚಾಚಾರ್ಯರು
೧೯೮೬ ಭಾಷಾ ಶಿಕ್ಷಣ
೧೯೮೬ ಉಭಯ ವೇದಾಂತದ ಉಭಯ ಕಲೆ
೧೯೮೬ ಜಗತ್ತಿನ ಜೀವಂತ ಧರ್ಮಗಳು
೧೯೮೬ ಭಾರತೀಯ ಮಹಿಳೆ
೧೯೮೭ ಶ್ರೀವೈಷ್ಣವ ನಿತ್ಯಾನುಸಂಧಾನಂ
೧೯೮೮ ಸರ್ವೋದಯ ಸಮಾಜ ನಿರ್ಮಾಣ
೧೯೮೮ ಭೂಲೋಕ ಸಂದರ್ಶನ
೧೯೮೮ ಶ್ರೀವಿಷ್ಣು ಸಹಸ್ರನಾಮ ಸ್ತೋತ್ರ
೧೯೮೮ ಶ್ರೀಲಕ್ಷ್ಮೀ ಸಹಸ್ರಾನಾಮ ಸ್ತೋತ್ರ
೧೯೮೯ ಅಷ್ಟೋತ್ತರ ಶತನಾಮ ಸ್ತೋತ್ರಗಳು
೧೯೮೯ ಶ್ರೀ ನಲ್ಲಾನ್ ಚಕ್ರವರ್ತಿ
೧೯೮೯ ಕೆಲವು ಜನಪ್ರಿಯ ಹಾಡುಗಳು
೧೯೯೦ ಜಗತ್ತಿನ ಪ್ರಸಿದ್ಧ ವ್ಯಕ್ತಿಗಳು

೧೯೯೧ ಶಾಲಾವಿಷಯ ಬೋಧನೆ
೧೯೯೧ ರಾಮಾನುಜರ ಬ್ರಹ್ಮಸೂತ್ರ ಭಾಷ್ಯ
೧೯೯೧ ಮೂರು ಸಿದ್ಧಾಂತ ಆರು ಉಪಾಸನೆ
೧೯೯೨ ಶ್ರೀವೈಷ್ಣವ ಆಚಾರ್ಯ ಪರಂಪರೆ
೧೯೯೨ ಕರ್ಮಾನುಷ್ಠಾನ ದೀಪಿಕೆ
೧೯೯೪ ಕೆಲವು ಶಿಕ್ಷಣ ಪದ್ಧತಿಗಳು
೧೯೯೪ ರಾಮಾನುಜರ ಪ್ರತಿಜ್ಞೆ
೧೯೯೫ ನೂತನ ಶಿಕ್ಷಣ ದರ್ಶನ
೧೯೯೫ ರಾಮಾನುಜರ ವಿಶಿಷ್ಟಾದ್ವೈತ
೧೯೯೫ ಎರಡು ಕಾವ್ಯಗಳ ಮಹಾನಾಯಕರು
೧೯೯೬ ಸಮಗ್ರಭಾರತ ದರ್ಶನ
೧೯೯೭ ಭಾರತದ ಸಂದರ್ಶನ
೧೯೯೭ ಹೊಸಮನೆ ಚಕ್ರವರ್ತಿ
೧೯೯೭ ಹಯವದನರಾವ್
೧೯೯೮ ರಾಮಾನುಜ ಮತ ದೀಪಿಕೆ
೧೯೯೯ ಹಿಂದೂ ಕುಟುಂಬದಲ್ಲಿ ಸ್ತ್ರೀ
೧೯೯೯ ಶ್ರೀವೈಷ್ಣವ ಸ್ತೋತ್ರಮಾಲಾ
೧೯೯೯ ಕೆಲವು ಧಾರ್ಮಿಕ ಕರ್ತವ್ಯಗಳು
೧೯೯೯ ಶ್ರೀಲಕ್ಷ್ಮೀ ಸ್ತೋತ್ರಮಾಲಾ
೧೯೯೯ ಹಿಂದೂಗಳ ಧಾರ್ಮಿಕ ಕೈಪಿಡಿ
೧೯೯೯ ಸದ್ಗುರು ಶ್ರೀರಾಘವೇಂದ್ರ
೨೦೦೦ ಓಂ ಶಿವ ಶಕ್ತಿ ಸ್ತೋತ್ರಮಾಲಾ
೨೦೦೧ ಭಕ್ತಿಮಾರ್ಗ ಪ್ರವರ್ತಕರು
೨೦೦೨ ಆರಾಧ್ಯ ದೇವತೆಗಳು
೨೦೦೨ ಶಬರಿಮಲೈ ಅಯ್ಯಪ್ಪಸ್ವಾಮಿ
೨೦೦೨ ಶ್ರೀವೈಷ್ಣವ ಉಪಾಕರ್ಮ ಕೈಪಿಡಿ
೨೦೦೩ ಯತೀಂದ್ರ ರಾಮಾನುಜ

## ಬರಲಿರುವ ಗ್ರಂಥಗಳು

೧. ತನುಮನ ದರ್ಶನ
೨. ನಮ್ಮ ತಾಯಿ ಜಗನ್ಮಾತೆ ಭಾರತ
೩. ದಿವ್ಯ ಪ್ರಬಂಧ ಮತ್ತು ಆಂಡಾಳ್
೪. ಮಾನವನ ವಿಕಾಸದ ಸಾಧನಗಳು

## ೬. ಈ ಲೇಖಕರ ಕೆಲವು ಕೃತಿಗಳ ವೈಶಿಷ್ಟ್ಯಗಳು

೧. ವಿಶ್ವದರ್ಶನ, ನಮ್ಮ ನಾಡು ಭಾರತ, ಎರಡೂ ಕ್ರಮವಾಗಿ ಮಾಧ್ಯಮಿಕ ಹಾಗೂ ಪ್ರೌಢಶಾಲೆಗಳ ಪಠ್ಯಪುಸ್ತಕಗಳೆಂದು ವಿದ್ಯಾ ಇಲಾಖೆಯಿಂದ ಅಂಗೀಕೃತವಾಗಿದೆ.

೨. ಕ್ರಿಯಾತ್ಮಕ ಶಿಕ್ಷಣ, ಶಿಕ್ಷಣಪ್ರದೀಪ, ಸಮಾಜ ಕಲ್ಯಾಣ ಚಳವಳಿ, ಮೂರೂ ಪ್ರೌಢಶಾಲೆ ಹಾಗೂ ಶಿಕ್ಷಕರ ತರಬೇತಿ ಸಂಸ್ಥೆಗಳ ಆಕರಗ್ರಂಥವೆಂದು ವಿದ್ಯಾಇಲಾಖೆಯಿಂದ ಅಂಗೀಕೃತವಾಗಿವೆ.

೩. ಶೈವಧರ್ಮ ದರ್ಶನವು ಎಲ್ಲ ಶೈವ-ವೀರಶೈವ ದೇವಾಲಯಗಳಿಗೂ, ರಾಮಾನುಜ ಸಿದ್ಧಾಂತ ದರ್ಪಣವು ಎಲ್ಲ ವೈಷ್ಣವ ದೇವಾಲಯಗಳಿಗೂ, ಕೊಳ್ಳಲು ಯೋಗ್ಯವಾಗಿದೆ ಎಂದು ಕರ್ನಾಟಕ ಸರ್ಕಾರದ ದತ್ತಿ ಇಲಾಖಾ ಆಯುಕ್ತರಿಂದ ಆಜ್ಞೆಯಾಗಿದೆ.

೪. ಜಗತ್ತಿನ ಪ್ರಸಿದ್ಧ ವ್ಯಕ್ತಿಗಳು, ಆರು ಮುದ್ರಣಗಳನ್ನು ಕಂಡಿದೆ.

೫. ಶೈವಧರ್ಮ ದರ್ಶನ, ರಾಮಾನಜ ಸಿದ್ಧಾಂತ ದರ್ಪಣ, ವಿಶಿಷ್ಟಾದ್ವೈತದ ಪಂಚಾಚಾರ್ಯರು ಹಿಂದೂಧರ್ಮ ದರ್ಶನ, ರಾಮಾನುಜರ ಬ್ರಹ್ಮಸೂತ್ರ ಭಾಷ್ಯ-

-ಇವು ಪ್ರಕಟಿಸಲು ಯೋಗ್ಯವಾದುವೆಂದು ಹೇಳಿದ ತಿರುಮಲ ತಿರುಪತಿ ದೇವಸ್ಥಾನದ ಸಮಿತಿ ಈ ಐದೂ ಪುಸ್ತಕಗಳಿಗೆ ಧನಸಹಾಯ ನೀಡಿದೆ.

೬. ಹಿಂದೂಧರ್ಮ ದರ್ಶನ, ಸಮಗ್ರ ಭಾರತ ದರ್ಶನ, ಹೊಸಮನೆ ಚಕ್ರವರ್ತಿ, ಮೂರೂ ಪ್ರಕಟವಾದ ವರ್ಷದ ಅತ್ಯುತ್ತಮ ಪುಸ್ತಕಗಳಲ್ಲಿ ಒಂದು ಎಂದು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಧನಸಹಾಯ ನೀಡಿದೆ.

೭. ಕ್ರಿಯಾತ್ಮಕ ಶಿಕ್ಷಣವು ವಿಚಾರ ಪ್ರಚೋದಕ ಸಾಹಿತ್ಯ ಎಂದು ಮೈಸೂರು ಸರ್ಕಾರದ ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ ೧೯೫೫ರಲ್ಲಿ ಎರಡನೆ ಬಹುಮಾನ ನೀಡಿದೆ.

೮. ರಾಮಾನುಜ ಸಿದ್ಧಾಂತ ದರ್ಪಣವು ಮಾನವಿಕ ಪ್ರಕಾರಗಳಲ್ಲಿ ೧೯೮೨ನೆ ವರ್ಷದ ಅತಿ ಉತ್ತಮ ಕೃತಿ ಎಂದು ಕರ್ನಾಟಕ ಸಾಹಿತ್ಯ ಅಕಾಡೆಮಿಯು ಪ್ರಶಸ್ತಿ ನೀಡಿದೆ.

೯. ಶ್ರೀವಿಷ್ಣು ಸಹಸ್ರನಾಮ ಸ್ತೋತ್ರವು ಅತ್ಯುತ್ತಮ ಧಾರ್ಮಿಕ ಗ್ರಂಥ ಎಂದು ಬೆಂಗಳೂರು ರಾಜಾಜಿನಗರದ ವಿಪ್ರವೃಂದವು ೧೯೯೯ರಲ್ಲಿ ಲೇಖಕರಿಗೆ ಸನ್ಮಾನ ಮಾಡಿದೆ.

೧೦. ರಾಮಾನುಜ ಮತ ದೀಪಿಕೆಯು ಶ್ರೇಷ್ಠ ವೈಚಾರಿಕ ಗ್ರಂಥವೆಂದು ೧೯೯೯ರಲ್ಲಿ, ಹಿಂದೂಗಳ ಧಾರ್ಮಿಕ ಕೈಪಿಡಿಯು ಅತ್ಯುತ್ತಮ ಆಧ್ಯಾತ್ಮಿಕ ಗ್ರಂಥವೆಂದು ೨೦೦೦ದಲ್ಲಿ ಗೊರೂರು ಸಾಹಿತ್ಯ ಪ್ರಶಸ್ತಿಯನ್ನು ಗಳಿಸಿವೆ.

೧೧. ಶಿಕ್ಷಣ ಸಾಹಿತ್ಯ ರಚನೆಯಲ್ಲಿ ಮಾಡಿದ ಸೇವೆಯನ್ನು ಮೆಚ್ಚಿ ಅತ್ತಿಮಬ್ಬೆ ಪ್ರತಿಷ್ಠಾನ,

ಗೊರೂರು ಪ್ರತಿಷ್ಠಾನ ಮತ್ತು ಕನ್ನಡ ಲೇಖಕಿಯರ ಪರಿಷತ್ತು ೧೯೯೮ರಲ್ಲಿ ಭಾರತ ಸ್ವಾತಂತ್ರ್ಯ ಸುವರ್ಣಮಹೋತ್ಸವ ಪ್ರಶಸ್ತಿಯನ್ನು ನೀಡಿ ಲೇಖಕರನ್ನು ಗೌರವಿಸಿವೆ.

೧೨. ಹಿಂದೀ ಪ್ರಚಾರಕ್ಕಾಗಿ ಮಾಡಿದ ಸೇವೆಯನ್ನು ಮೆಚ್ಚಿ ಬೆಂಗಳೂರಿನ ಕರ್ನಾಟಕ ಮಹಿಳಾ ಹಿಂದೀ ಸೇವಾ ಸಮಿತಿಯು ೧೯೯೯ರಲ್ಲಿ ಲೇಖಕರಿಗೆ ಸನ್ಮಾನ ಮಾಡಿದೆ.

೧೩. ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಲೇಖಕರನ್ನು ಶಿಕ್ಷಣ ತಜ್ಞ, ಹೆಸರಾಂತ ಲೇಖಕ ಎಂದು ಕರೆದು ೨೦೦೦ದಲ್ಲಿ ಗೌರವಿಸಿದೆ.

೧೪. ವಿಶಿಷ್ಟಾದ್ವೈತವೇದಾಂತ ಹಾಗೂ ಸಂಸ್ಕೃತ ಸ್ತೋತ್ರಗಳ ಪ್ರಚಾರದಲ್ಲಿ ಮಾಡಿದ ಕಾರ್ಯವನ್ನು ಮೆಚ್ಚಿ ಬೆಂಗಳೂರಿನ ಗೀತ ಗೋವಿಂದ ಸಂಸ್ಕೃತ ಸಂಘವು ೨೦೦೦ದಲ್ಲಿ ಲೇಖಕರಿಗೆ ಸನ್ಮಾನ ಮಾಡಿದೆ.

೧೫. ಬೆಂಗಳೂರಿನ ವೇದಧರ್ಮ ಪರಿಪಾಲನ ಸಭೆಯು ೨೦೦೧ರಲ್ಲಿ ಲೇಖಕರಿಗೆ ವೇದಸೇವಾಸಕ್ತ ಎಂಬ ಪ್ರಶಸ್ತಿಯನ್ನು ನೀಡಿ ಸನ್ಮಾನ ಮಾಡಿದೆ.

